# ರಾಯಚೂರು ಇತಿಹಾಸ

( RESEARCH BOOK )




ಬರೆದವರು:—

ಶ್ರೀ ಬಿ. ವಿ. ಶ್ರೀನಿವಾಸರಾವ್, ಎಂ. ಎ.

ವೀ... ...ತೆ, ವೀರಶೈವ ಇತಿಹಾಸ, ವೀರಶೈವ ದೇವರಾಯ

...ಮಾಜಿ ಮ್ಯಾನೇಜರ್, ಕರ್ಣಾಟಕ ಪ್ರಾಂತ

... ಮತ್ತು ಇತಿಹಾಸ ಪ್ರಾಧ್ಯಾಪಕರು.

...ಂಕಟೇಶ ದೇಸಾಯಿ ಕಾಲೇಜು,

ರಾಯಚೂರು.

ಕನ್ನಡ ಮತ್ತು ಸಂಸ್ಕೃತ ಪಂಡಿತರು
ಹವ್ದರ್ಡ ಹೈಸ್ಕೂಲ್
ರಾಯಚೂರು.

.........

ಈ ಗ್ರಂಥವು ಮಹಾಕವಿ ಕುಮಾರವ್ಯಾಸನ ಜೀವನ ಮತ್ತು ಕಾವ್ಯಕ್ಕೆ ಸಂಬಂಧಿಸಿದಂತಿರುವ ಹಲವಾರು ಸಂಶೋಧನಾತ್ಮಕ ನಿಬಂಧಗಳನ್ನು ಒಳಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯುಳ್ಳ ವಿಮರ್ಶಕರಿಗೂ, ಪಂಡಿತರಿಗೂ, ಸಾಹಿತ್ಯಾಭ್ಯಾಸಿಗಳಿಗೂ, ವಿದ್ಯಾರ್ಥಿಗಳಿಗೂ ಅವಶ್ಯವಾಗಿ ಸಂಗ್ರಹಿಸಲರ್ಹವಾಗಿದೆ.



ಹೆಚ್ಚಿನ ವಿವರಗಳಿಗಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಬರೆಯಿರಿ

ಅಮರವಾಣಿ ಕಾರ್ಯಾಲಯ,
ರಾಯಚೂರು.

# ರಾಯಚೂರು ಇತಿಹಾಸ

( RESEARCH BOOK )





ಬರೆದವರು:—

ಶ್ರೀ. ಬಿ. ವಿ. ಶ್ರೀನಿವಾಸರಾವ್, ಎಂ. ಎ.

ವೀರಶೈವ ಚರಿತ್ರೆ, ವೀರಶೈವ ಇತಿಹಾಸ, ವೀರಶೈವ ದೇವರಾಯ
ಗ್ರಂಥಕರ್ತರು, ಮಾಜಿ ಮ್ಯಾನೇಜರ್, ಕರ್ಣಾಟಕ ಪ್ರಾಂತ
ರಚನಾ ಸಮಿತಿ ಮತ್ತು ಇತಿಹಾಸ ಪ್ರಾಧ್ಯಾಪಕರು.

ಲಕ್ಷ್ಮೀ ವೆಂಕಟೇಶ ದೇಸಾಯಿ ಕಾಲೇಜು,
ಚೂರು.

೨೫ ಅಕ್ಟೋಬರ್, ೧೯೫೭.

ಪ್ರಥಮ ಮುದ್ರಣ, — ೧೦೦೦ ಪ್ರತಿಗಳು.

ಪ್ರಕಾಶಕರು:-

ಪಂ. ಶ್ರೀ. ಡಿ. ಎಂ. ಸೂಗವೀರಶರ್ಮರು.

ಕನ್ನಡ ಅಧ್ಯಾಪಕರು

ಹಮ್ದರ್ದ ಹೈಸ್ಕೂಲ್, ರಾಯಚೂರು.



ಬೆಲೆ 0—8—0

ಮುದ್ರಕರು:-

ಶ್ರೀಅಮರವಾಣಿ ಮುದ್ರಣಾಲಯ,

ಪ್ರಿಂಟರ್ಸ್ & ಬುಕ್ ಬೈಂಡರ್ಸ್,

ರಾಯಚೂರು.

= ಸಿರಿಗನ್ನಡಂಗೆಲ್ಗೆ =

ಕನ್ನಡಕುಲ ಭೂಷಣರಾದ



ಶ್ರೀ. ಸಿದ್ದವನಹಳ್ಳಿ,

ನಿಜಲಿಂಗಪ್ಪನವರು.

ಭಾರತದ ಪಾರ್ಲಿಮೆಂಟ್ ಸದಸ್ಯರು

ಓಂ ಶಿವಾಯನಮಃ

# - ಸಂದೇಶ -

ಶ್ರೀಯುತ ಶ್ರೀನಿವಾಸರಾಯರಿಗೆ ನಮಸ್ಕಾರಗಳು—

ತಮ್ಮ 29-9-1956 ರ ಕಾಗದ ಈದಿನ ಇಲ್ಲೀ ಕೈಸೇರಿತು. ತಾವು ಇತಿಹಾಸ ಪ್ರಸಿದ್ಧವೂ, ವ್ಯಾಪಾರ ಕೇಂದ್ರವೂ, ಭಾವಿ ಕರ್ಣಾಟಕ ರಾಜ್ಯದಲ್ಲಿ ಪ್ರಮುಖ ಪಾತ್ರವನ್ನು ವಹಿಸತಕ್ಕದ್ದೂ ಆಗಿರುವ ರಾಯಚೂರಿನ ಇತಿಹಾಸವನ್ನು ಸಂಶೋಧಿಸಿ, ಪ್ರಸಿದ್ಧಿಸುವುದು ಅತ್ಯಂತ ಸಂತೋಷದ ಸಂಗತಿ. ರಾಯಚೂರಿನ ಭವಿಷ್ಯ ನನ್ನ ದೃಷ್ಟಿಯಿಂದ ಭವ್ಯವಾಗಿದೆ. ತಮ್ಮ ಸಾಹಸಕ್ಕೆ ಪ್ರೋತ್ಸಾಹ ದೊರೆಯಲಿ.

ಚಿತ್ರದುರ್ಗ
2-10-56

ಇತಿ. ತಮ್ಮವ—
(ಸಹಿ) ನಿಜಲಿಂಗಪ್ಪ, ಎಂ. ಪಿ.

# — ಮುನ್ನುಡಿ —

ಪುಸ್ತಕಕ್ಕೆ ಮುನ್ನುಡಿಯೆಂದರೆ ಮೂಗಿಗೆ ಮೂಗುತಿ ಇದ್ದಹಾಗೆ. ಅದು ನಿಸರ್ಗ ನೇಮವಲ್ಲ; ಸಾಂಸ್ಕೃತಿಕ ಸಂಪ್ರದಾಯವಷ್ಟೆ; ಮುಖಕ್ಕೆ ಮೂಗು ಹೇಗೆ ಚಂದವೋ ಹಾಗೆ ಮೂಗಿಗೆ ಮೂಗುತಿ ಚೆಂದವೆನ್ನಲು ನಾನು ಸಿದ್ಧನಿಲ್ಲ. ಹಾಗೆ ಮಾಡುವುದು ಸೃಷ್ಟಿಸೌಂದರ್ಯಕ್ಕೆ ಅಪಮಾನಗೈದಂತೆಯೇ ಸರಿ. ಇಂತಹ ಶಿಷ್ಟಾಚಾರಣೆಗೆ ಬಂಧು ಶ್ರೀ. ಶ್ರೀನಿವಾಸರಾಯರು ನನ್ನನ್ನೇಕೆ ಆರಿಸಿಕೊಂಡರೋ ನನಗೆ ತಿಳಿಯದು. ಅದರಲ್ಲೂ ಇದು ಇತಿಹಾಸ ಸಂಶೋಧನಾತ್ಮಕ ಗ್ರಂಥವು ಬೇರೆ. ವಿದ್ಯಾರ್ಥಿ ಜೀವನದಿಂದ ಹಿಡಿದು ಇಲ್ಲಿಯವರೆಗಾದರೂ ನನಗೆ ಬೇಸರ ತರುವಂತಹ ವಿಷಯವೆಂದರೆ ಇತಿಹಾಸ. "ಇತಿಹಾಸ ಜ್ಞಾನಿಗಳಸೊತ್ತು" ಎಂದು ಗ್ರಂಥಕರ್ತರೇ ಒಂದೆಡೆ ಹೇಳಿದ್ದಾರೆ. ಚರಿತ್ರೆಗೂ, ಸಾಹಿತಿಗಳಿಗೂ ನಿಕಟ ಸಂಬಂಧವುಂಟು. ಸ್ವತಃ ಜ್ಞಾನಿಯೂ, ಸಾಹಿತಿಯೂ ಅಲ್ಲದ ನಾನು ಬರೆಯುವುದು ಕೇವಲ ಮುರುಕ ನುಡಿಯಾದೀತೇ ಹೊರತು ಮುನ್ನುಡಿಯಲ್ಲ.

ಆದರೂ ಮುನ್ನುಡಿ ಬರೆಯಲೇಬೇಕೆಂದು ಒತ್ತಾಯ ಪಡಿಸಿದ ಬಂಧು ಶ್ರೀ. ಶ್ರೀನಿವಾಸರಾಯರ ಮಾತಿಗೆ ಕಟ್ಟುಬಿದ್ದು ನಾಲ್ಕು ಮಾತುಗಳನ್ನು ಬರೆಯಲೇಬೇಕಾಯಿತು. ಇತಿಹಾಸದ ಕಡುವೈರಿಯಾದ ನಾನು ಹಠಾತ್ತಾಗಿ ಇತಿಹಾಸವನ್ನು ಓದಲೇಬೇಕಾಯಿತು.

ಅಶೋಕನ ಕಾಲದಿಂದ ಇಂದಿನವರೆಗಿನ ರಾಯಚೂರಿನ ಉಜ್ವಲ ಚ ಯನ್ನೋದಿ ನನ್ನ ಮನದಲ್ಲಿ ಇತಿಹಾಸದಬಗ್ಗೆ ಹೊಸಭಾವನೆಯೊಂದು ಮ ಹೋಗಿದೆ. ನೂತನ ಕರ್ನಾಟಕ ರಾಜ್ಯದ ಶುಭೋದಯ ವಾಗುವ ಈ ಸಂಧರ್ಭ ಕನ್ನಡ ನೆಲಕ್ಕೀನೆ ಮಕುಟ ಮಣಿಯಾಗಲಿರುವ ರಾಯಚೂರಿನ ಚಿತ್ರವನ್ನು ಎ ಕೋಟ ಕನ್ನಡಿಗರಕಣ್ಣುಮುಂದೆ ಇರಿಸುವ ಬಂಧು ಶ್ರೀ. ಶ್ರೀನಿವಾಸರಾಯರ ನಾನೆಂದಿಗೂ ಮರೆಯುವಂತಿಲ್ಲ. ರಾಯಚೂರಿನ ಗತವೈಭವದ ಚರಿತ್ರೆಯನ್ನೊ ಮುಂಬರುವ ಕರ್ನಾಟಕವನ್ನೂ, ರಾಯಚೂರು ಜಿಲ್ಲೆಯನ್ನು ಕಟ್ಟಲು ನಾವೆಲ್ಲ ಹೆಣಗುವಂತಾಗಲಿ. ಇದು ನಮಗೆ ಇತಿಹಾಸ ಕಲಿಸುವ ಪವಿತ್ರಪಾಠ. ಈ " ರಾ ಚೂರು ಇತಿಹಾಸ " ದ ಅವಲೋಕನದಿಂದ ರಾಯಚೂರಿನ ಮಕ್ಕಳು ಈ ಪ ಕಲಿತರೆ ಒಳ್ಳೇದು.

ನೂತನ ಕರ್ನಾಟಕ ಪ್ರಾಂತದಲ್ಲಿ ರಾಯಚೂರು ನಗರ ಮತ್ತು ಜಿಲ ಉಜ್ವಲ ಭವಿಷ್ಯವಿದೆ. ಅದಕ್ಕಾಗಿ ನಾವೆಲ್ಲರೂ ಇಂದಿನಿಂದ ಆ ದಾರಿಯಲ್ಲಿಸಾಗೋ ಗ್ರಂಥ ಕರ್ತರಿಗೆ ಮಂಗಳವಾಗಲಿ.

* ಜಯಕರ್ನಾಟಕ *

ತಾ|| 15-10-56
ರಾಯಚೂರು.

ಕೆ. ಆರ್. ಹಿರೇಮಠ
ಅಡ್ವಕೇಟ್ M. L. A.



# — ಪೀಠಿಕೆ —



ಸಾಕ್ಷಾತ್ ಪರಶಿವನನ್ನು ಪ್ರಾರ್ಥಿಸಿ, ನನ್ನ ಈ ಸಂಶೋಧನಾ ಗ್ರಂಥಕ್ಕೆ ಪೀಠಿಕೆ ಬರೆಯುವ ಸಂದರ್ಭ ಪಡೆದಿದ್ದೇನೆ. ನೂತನ ವಿಶಾಲ ಮೈಸೂರಿನಲ್ಲಿ ನಮ್ಮ ರಾಯಚೂರು ವಿಳನವಾಗಿದೆ. ಬಹಳ ಹಿಂದೆ ಬಿದ್ದಿದ್ದ ರಾಯಚೂರು ಈಗ ಪ್ರಗತಿ ಪಡೆಯುಲಿದೆ. ಈ ಸಂದರ್ಭದಲ್ಲಿ ರಾಯಚೂರಿನ ಇತಿಹಾಸವನ್ನು ಸಂಶೋಧಿಸಿ ಸಂಕ್ಷಿಪ್ತವಾಗಿ ರಚಿಸಿ, ಪ್ರಕಟಿಸಿ, ನಮ್ಮ ಎಲ್ಲಾ ಕನ್ನಡಿಗರಿಗೂ, ರಾಯಚೂರಿನಲ್ಲಿ ಆಸಕ್ತಿ ಉಂಟುಮಾಡಲು ತೀರ್ಮಾನಿಸಿದ್ದೇನೆ. ಈ ರಾಯಚೂರು ಎಂಬ ಪ್ರದೇಶ ಮೌರ್ಯರ ಕಾಲದಲ್ಲೇ ಇತ್ತೆಂದು ಚರಿತ್ರೆ ನಮಗೆ ತಿಳಿಸುತ್ತದೆ. ಅಲ್ಲಿಂದ ನಾನಾ ವಂಶದರಾಜರುಗಳ ಆಧೀನಕ್ಕೆ ಒಳಗಾಗಿ ವಿವಿಧ ಸಂಸ್ಕೃತಿಗಳ ಸಮೂಹದಲ್ಲಿ ಓಲಾಡ ಬೇಕಾಯಿತು. ವಿಜಯನಗರದ ಕಾಲದಲ್ಲಿ ರಾಯಚೂರು ಕರ್ಣಾಟಕ ಸಂಸ್ಕೃತಿಯ ಬೀಡಾಗಿತ್ತು. ಅಲ್ಲಿಂದ ಮುಸ್ಲಿಂಮರ ಆಳ್ವಿಕೆಗೆ ಒಳಪಟ್ಟು, ಕನ್ನಡ ಸಂಸ್ಕೃತಿಗೆ ರಾಯಚೂರಿನಲ್ಲಿ ಬಹಳ ಪ್ರೋತ್ಸಾಹ ದೊರಕಲಿಲ್ಲ. ಈಗ ರಾಯಚೂರಿನ ಜನರು ನಮ್ಮ ಕರ್ಣಾಟಕದ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಕನ್ನಡ ಕುಲದೀಪಗಳಂತೆ ಆಗಲು ಸಮಯ ಬಂದಿದೆ.

ಈಗಾಗಲೇ, ನಾನು ವೀರಶೈವ ಚರಿತ್ರೆ, ವೀರಶೈವ ಇತಿಹಾಸ, ವೀರಶೈವ ದೇವರಾಯ, ಮಲ್ಲಿಕಾರ್ಜುನ, ವಿರೂಪಾಕ್ಷ, ಎಂಬ ಸಂಶೋಧನಾ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದೇನೆ. ಕರ್ಣಾಟಕದ ಎಲ್ಲಾ ಪತ್ರಿಕೆ ಮತ್ತು ಸಂಸ್ಕೃತಿಯ ಕೇಂದ್ರಗಳಿಂದ ಒಳ್ಳೆಯ ಅಭಿಪ್ರಾಯಗಳು ಬಂದಿವೆ. ಧಾರವಾಡ, ಹುಬ್ಬಳ್ಳಿ, ಉಡುಪಿ, ಮಂಗಳೂರು, ಗದಗ, ಯಾದಗಿರಿ, ಬಳ್ಳಾರಿ, ಹೊಸಪೇಟೆ, ಕೊಪ್ಪಳ, ಬೆಂಗಳೂರು, ಮತ್ತು ಮೈಸೂರುಗಳಲ್ಲಿ ಹೊರಡುವ ಎಲ್ಲಾ ಕನ್ನಡ ಪತ್ರಿಕೆಗಳಿಗೂ, ಐವತ್ತು ಲೇಖನಗಳನ್ನು ಕೊಟ್ಟಿದ್ದೇನೆ. ಅವುಗಳೆಲ್ಲಾ ಆಯಾ ಪತ್ರಿಕೆಗಳಿಂದ ಪ್ರಕಟವಾಗಿ ಬಂದಿವೆ. ಬೊಂಬಾಯಿ, ಕೊಚ್ಚಿನ್, ಹೈದರಾಬಾದ್, ಮುಂತಾದ ಕಡೆಗಳಿಂದ ಹೊರಡುವ ಇಂಗ್ಲೀಷ್ ಪತ್ರಿಕೆಗಳಲ್ಲಿ ನನ್ನ ಇಂಗ್ಲೀಷ್ ಲೇಖನಗಳು ಪ್ರಕಟವಾಗಿ ಬಂದಿವೆ.

ಈಗಿನ "ರಾಯಚೂರು ಇತಿಹಾಸ" ಎಂಬ ನನ್ನ ಗ್ರಂಥಕ್ಕೆ ಮುನ್ನುಡಿ ಬರೆದಿರುವ ಹೈದರಾಬಾದ್ ಶಾಸನ ಸಭೆಯ ಸದಸ್ಯರಾದ ಮಾನ್ಯ ಶ್ರೀಕಲಿಗಣನಾಥ

ವಕೀಲ ಹಿರೇಮಠ ರವರಿಗೂ, ಪ್ರಕಾಶರಾಗಿ ನಿಂತು ಮುಂದೆಬಂದಿರುವ, ನವ
ರಾಯಚೂರಿನ ಹಮ್‌ದರ್ದ ಹೈಸ್ಕೂಲಿನ, ಕನ್ನಡ ಅಧ್ಯಾಪಕರೂ ಮತ್ತು ಸುಪ್ರಸಿ
ಲೇಖಕರೂ ಆದ ಪಂಡಿತ ಶ್ರೀ. ಡಿ. ಎಂ. ಸೂಗವೀರಶರ್ಮರಿಗೂ. ಈ ಗ್ರಂಥವನ
ಮುದ್ರಿಸಿ ಕೊಟ್ಟಿರುವ ಅಮರವಾಣಿ, ಸಾರಸ್ವತ ಮಾಸಪತ್ರಿಕೆ, ಅಮರವಾ
ಕಾರ್ಯಾಲಯದ ಸ್ಥಾಪಕರಾದ ಶ್ರೀ ವೀರೇಶ್ವರ ಶಾಸ್ತ್ರಿ ವಿದ್ವಾನ್‌ರವರಿಗೂ, ನ
ಅನಂತಾನಂತ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಗ್ರಂಥವನ್ನು ನಮ್ಮ ಭಾರತದ ಶ್ರೇಷ್ಠ ರಾಜಕಾರಣಿಗಳಲ್ಲಿ ಒಬ್ಬರ
ಭಾರತದ ಪಾರ್ಲಿಮೆಂಟ್ ಸದಸ್ಯರೂ, ವಿಶಾಲ ಕರ್ನಾಟಕಪ್ರಾಂತ ವಾದಿಗಳ
ಶರಣಸಾಹಿತ್ಯ ಪ್ರೇಮಿಗಳೂ, ಆದ ಶರಣ ಶ್ರೀ ಸಿದ್ದವನ ಹಳ್ಳಿ ನಿಜಲಿಂಗಪ್ಪನವರ
ಹೃತ್ಪೂರ್ವಕವಾಗಿ ಸಮರ್ಪಿಸಲಾಗಿದೆ. ಇದಕ್ಕೆ ಸಂತೋಷವಾಗಿ ಒಪ್ಪಿಕೊಂಡ
ನಮಗೆ ಸಂದೇಶ ಕಳುಹಿಸಿರುವ, ಶ್ರೀ ನಿಜಲಿಂಗಪ್ಪನವರಿಗೆ ಪರಶಿವನು ಸಕ
ಆಯುರಾರೋಗ್ಯ ಅಭಿವೃದ್ಧಿಯನ್ನುಂಟು ಮಾಡಲಿ.

ನನ್ನ ಎಲ್ಲಾ ಗ್ರಂಥಗಳಿಗೆ ಸಂದೇಶ ಕಳುಹಿಸಿರುವ ಬಿಹಾರಿನ ಗವರ್ನ
ಶ್ರೀ. ಆರ್. ಆರ್. ದಿವಾಕರ್, ಭಾರತ ಸರ್ಕಾರದ ಮಂತ್ರಿಗಳಾದ ಶ್ರೀ. ಡಿ.
ಕರಮರ್‌ಕರ್ ಮತ್ತು ಶ್ರೀ. ಬಿ. ಎಸ್. ದಾತಾರ್, ಬೊಂಬಾಯಿ ಸರ್ಕಾರ
ಉಪಮಂತ್ರಿಗಳಾದ ಶ್ರೀ. ಕೆ. ಎಫ್. ಪಾಟೀಲ್ ರವರಿಗೆ ನನ್ನ ಧನ್ಯವಾದಗಳು. ನ
ಈ ಗ್ರಂಥ ನಮ್ಮ ಲಕ್ಷ್ಮೀವೆಂಕಟೇಶ ದೇಸಾಯಿಕಾಲೇಜಿನ ಕೀರ್ತಿಯನ್ನು ಹೆಚ್ಚಿಸ
ಬಹಳಸಹಕಾರಿ ಆಗಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಈ ಕೆಳಗೆ ನಮೂದಿಸಿರುವ ಮಹನೀಯರು, ನನ್ನ ಗ್ರಂಥವನ್ನು ಓದಿ
ಅನೇಕ ಸಲಹೆಗಳನ್ನು ಕೊಟ್ಟು ಆಶೀರ್ವದಿಸಿದ್ದಾರೆ. ಇವರಿಗೆ ನನ್ನ ವಂದನೆಗಳನ
ಅರ್ಪಿಸುತ್ತೇನೆ.

(1) ಡಾಕ್ಟರ್ ಬಿ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್
ಎಂ. ಎ. ಪಿ ಹೆಚ್. ಡಿ
(ಚರಿತ್ರೆ ಪ್ರೊಫೆಸರ್, ಮೈಸೂರು ವಿಶ್ವವಿದ್ಯಾಲಯ)

(2) ಡಾಕ್ಟರ್ ಎಸ್. ಎಂ. ಹುಣಶಾಳ, ಎಂ. ಎ. ಪಿ ಹೆಚ್. ಡಿ
ಮುಖ್ಯೋಪಾಧ್ಯಾಯರು, ಹಮದರ್ದ್ ಹೈಸ್ಕೂಲ್, ರಾಯಚೂರ

(3) ಶ್ರೀ. ಜಿ. ಕೆ. ರಾಜಪುರೋಹಿತ,

ಬಿ ಎ. ಎಲ್. ಎಲ್. ಬಿ. ಪ್ರಮುಖ ವಕೀಲರು

( ಸೆಕ್ರೆಟರಿ, ದಿ. ಲಕ್ಷ್ಮೀ ವೆಂಕಟೇಶದೇಸಾಯಿ ಕಾಲೇಜಿನ

ಗವರ್ನಿಂಗ್‌ಬಾಡಿ. ) ರಾಯಚೂರು.

(4) ಶ್ರೀ. ಸಾಹಿತ್ಯ ಶಿರೋಮಣಿ. ಸೋಮಶೇಖರಶಾಸ್ತ್ರಿಗಳು.

ಎಂ. ಎ. ಎಲ್. ಎಲ್. ಬಿ. ವಕೀಲರು. ರಾಯಚೂರು.

(5) ಡಾಕ್ಟರ್ ಸಂಗಮೇಶ್ವರ ಸರದಾರ್.

ನಾಯಕರು:- ಕಾಂಗ್ರೆಸ್ ಪಕ್ಷ ರಾಯಚೂರು, ಮುನಿಸಿಪಾಲಿಟಿ.

(6) ಡಾಕ್ಟರ್ ರಾಮಕೃಷ್ಣ, ಮಾಜಿಅಧ್ಯಕ್ಷ

ರಾಯಚೂರು, ಮುನಿಸಿಪಾಲಿಟಿ.

(7) ಶ್ರೀ. ಉಲ್ಲಾಳ ವಾಸುದೇವ ಭಟ್. ಎಂ. ಎ.

ಸಂಸ್ಕೃತ ಪ್ರಾಧ್ಯಾಪಕರು.

ಲಕ್ಷ್ಮೀವೆಂಕಟೇಶ ದೇಸಾಯಿ ಕಾಲೇಜು, ರಾಯಚೂರು.

ಒಟ್ಟಿನಲ್ಲಿ, ವಿಶಾಲ ಮೈಸೂರು, ನಮ್ಮ ರಾಯಚೂರನ್ನು ಒಳಗೊಂಡು ವಿಶಾಲ ಮನೋಭಾವನೆತಾಳಿ, ವಿವೇಕದಿಂದ ಕೂಡಿದ ಪ್ರಾಂತವಾಗಲಿದೆ. ನಮ್ಮ ಕನ್ನಡ ರಾಜ್ಯಕ್ಕೆ ಕೂಡಲಸಂಗನ ಆಶೀರ್ವಾದ ನಿರಂತರ ಇರಲಿ.

ಇತಿ ತಮ್ಮವ

ಸರ್ವ ಧರ್ಮ ವಿಶಾರದ ಬಿ. ವಿ. ಶ್ರೀನಿವಾಸರಾವ್. ಎಂ. ಎ.

ಮಾಜಿ ಮ್ಯಾನೇಜರ್

ಕರ್ನಾಟಕ ಪ್ರಾಂತ ರಚನಾ ಸಮಿತಿ,ಮತ್ತು

ಇತಿಹಾಸ ಪ್ರಾಧ್ಯಾಪಕರು,

ಲಕ್ಷ್ಮೀ ವೆಂಕಟೇಶ ದೇಶಾಯಿ ಕಾಲೇಜು;

ರಾಯಚೂರು

( ವಿಶಾಲ ಮೈಸೂರು. )

# * ಪ್ರಕಾಶಕರ ವಾಣಿ *

ಭಾರತದ ಇತಿಹಾಸ, ಪ್ರಸಿದ್ಧ ಸ್ಥಳಗಳಲ್ಲಿ ರಾಯಚೂರು ಒಂದಾಗಿದೆ ಇದು ತುಂಗಭದ್ರ ಮತ್ತು ಕೃಷ್ಣಾನದಿಗಳ ಮಧ್ಯದಲ್ಲಿದೆ. ಇಲ್ಲಿಯ ಭೂಮಿಯ ಫಲವತ್ತಾದುದು. ಸಂಪತ್ಪೂರ್ಣ ವಾದದು. ಜನಗಳು, ಆರೋಗ್ಯ ದೃಢಕಾಯರು ವಿದ್ಯೆ, ಕಲೆಗಳಲ್ಲಿ, ಮುಂದುವರಿದವರು. ರಾಯಚೂರು ತಮಗೆ ಬೇಕು, ತಮ ಬೇಕು, ಎಂದು ಕಾಲ ಕಾಲಕ್ಕೆ ಬೇರೆ ಬೇರೆ ಜನ ಅರಸರೂ, ಇದನ್ನು ಅಧೀನದಲ್ಲಿಟ ಕೊಳ್ಳಲು ಬಡಿದಾಡಿದರು. ಇದರ ಫಲವಾಗಿ, ಈ ಪ್ರದೇಶದಜನವು ಆಗಾಗ್ಗೆ ಸಿಹಿ ಕಹಿ, ಫಲಗಳನ್ನು ಅನುಭವಿಸ ಬೇಕಾಗಿ ಬಂದಿತು.

ಇಲ್ಲಿ ಹಿಂದೂಗಳ, ಮುಸಲ್ಮಾನರ ಸಂಸ್ಕೃತಿಯು ಕುರುಹು ತುಂಬ ಸಿಗುತ್ತಿದೆ ಈ ಕುರುಹುಗಳು ಈ ಪಟ್ಟಣವು ಎರಡು ಜನಾಂಗಗಳ ಒಡೆತನಕ್ಕೆ ಬೇರೆ ಬೇ ಕಾರಣಗಳಲ್ಲಿ ಸೇರಿದ್ದಿತೆಂಬಬಗ್ಗೆ ಆಧಾರಗಳಾಗಿವೆ. ಇಲ್ಲಿ ಶರಣರ ಸಂಪ್ರದಾಯ ಬೋಧೆಯು ಸಾರ್ವೋದ್ಧಾರವಾಗಿ ನಡೆದುಬಂದ ಫಲವಾಗಿ, ಹಿಂದೂ ಮುಸಲ್ಮಾನ ಎರಡು ಜನಾಂಗವೂ ಪರಸ್ಪರ ಬೆರೆತುಬಾಳುತ್ತಿದೆ. ಹಿಂದೂಗಳ ಜಾತ್ರೆಗಳ ಮುಸಲ್ಮಾನರೂ, ಮುಸಲ್ಮಾನ ಉರುಸುಗಳಲ್ಲಿ ಹಿಂದುಗಳೂ, ಒಟ್ಟಾಗಿಯೆ ಭಾಗ ತೆಗೆದುಕೊಳ್ಳುತ್ತಿದ್ದಾರೆ.

ಈ ಸ್ಥಳದ ಇತಿಹಾಸವು ಬಹುಕಾಲದ ಮುಂಚೆಯೇ ಬರೆಯಲ್ಪಡಬೇಕ ದುದು ಅವಶ್ಯಕವಾಗಿತ್ತು. ಆ ಕಾರ್ಯವನ್ನು ಈ ವರವಿಗೆ ಯಾರೂಮಾಡದೆ ಇದ್ದದು ದೊಡ್ಡ ಕೊರತೆಯಾಗಿತ್ತು. ಈಗ ನಮ್ಮ ರಾಯಚೂರಿನ ಲಕ್ಷ್ಮೀ ವೆಂಕಟೇ ದೇಸಾಯಿ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರೂ ಆದಶ್ರೀ. ಬಿ.ವಿ. ಶ್ರೀನಿವಾಸರಾವ ಎಂ. ಎ ರವರು ಈ ಕೊರತೆಯನ್ನು ದೀರ್ಘಕಾಲ ಸಂಶೋಧನೆ ನಡೆಸಿ ಅತ್ಯಂ ಪರಿಶ್ರಮವಹಿಸಿ ಪೂರ್ಣಮಾಡಿರುವರು.

ಈ ಗ್ರಂಥಕ್ಕೆ ನಮ್ಮ ಇಡೀಕರ್ನಾಟಕ ಏಕೀಕರಣದ ವಾದಿಗಳೂ. ಸುಪ್ರ ಸಿದ್ಧ ವಕೀಲರೂ, ಭಾರತಾದ್ಯಂತ ಹೆಸರುವಾಸಿಯಾದ ರಾಜಕಾರಣಿಗಳಾದ ಶರಣ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪ ಎಂ. ಪಿ. ರವರಿಗೆ ಗೌರವಪೂರ್ವಕವಾಗಿ ಅರ್ಪಿ— ಸಿರುವುದು, ನಮ್ಮ ರಾಯಚೂರಿನ ಪ್ರಗತಿಯು ಹೆಗ್ಗುರುತಾಗಿದೆ.

ಈ ಗ್ರಂಥಕ್ಕೆ ಮುನ್ನುಡಿ ಬರೆದುಕೊಟ್ಟಿರುವ ನಮ್ಮ ಹೈದರಾಬಾದ್ ಶಾಸನಸಭಾ ಸದಸ್ಯರಾದ, ಶ್ರೀ ಕಲಿಗಣನಾಥ ವಕೀಲ್ ಹಿರೇಮಠ್ ಅವರಿಗೆ ನನ್ನ ಧನ್ಯವಾದಗಳು.

ಈ ಗ್ರಂಥವು ವಿದ್ಯಾರ್ಥಿಗಳಿಗೆ ಪ್ರಿಯವಾಗಬಲ್ಲುದು. ಇತಿಹಾಸ ಪ್ರೇಮಿಗಳಾದ ಸಕಲಸಜ್ಜನರನ್ನು ತೃಪ್ತಿ ಪಡಿಸಬಲ್ಲುದು. ಎಂದು ನಾನು ನಂಬುತ್ತೇನೆ. ಗ್ರಂಥಕರ್ತರಾದ ಶ್ರೀ. ಶ್ರೀನಿವಾಸರಾಯರು ಈ ಮೊದಲೇ, ವೀರಶೈವ ದೇವರಾಯ ಮಲ್ಲಿಕಾರ್ಜುನ, ವಿರೂಪಾಕ್ಷ, ಮುಂತಾದ ಸಂಶೋಧನಾತ್ಮಕ ಗ್ರಂಥಗಳನ್ನು ಬರೆದು ಲೋಕಪ್ರಿಯತೆಯನ್ನು ಸಂಪಾದಿಸಿದ್ದಾರೆ. ಸಕಲ ಕನ್ನಡಿಗರೂ, ಈ ಗ್ರಂಥವನ್ನು ಪ್ರೀತಿಯಿಂದ ಕೈಗೆತ್ತಿಕೊಳ್ಳಲಿ. ಎಂದು ನಾವು ಬಯಸುತ್ತೇವೆ. ಮತ್ತು ಪರಶಿವನು ಒಟ್ಟಿನಲ್ಲಿ ವಿಶಾಲ ಮೈಸೂರಿನ ಎಲ್ಲಾ ಕನ್ನಡಕುಲ ರಸಿಕರಿಗೆ ಸಕಲಸನ್ಮಂಗಳಗಳನ್ನು ಉಂಟುಮಾಡಲಿ, ಎಂದು ಪ್ರಾರ್ಥಿಸುತ್ತೇನೆ.

ರಾಯಚೂರು.
ತಾ|| ೧೪-೧೦-೫೬
(ವಿಜಯದಶಮಿ)

ಇಂತು ಪ್ರಕಾಶಕರು.
ಪಂಡಿತ. ಶ್ರೀ. ಡಿ. ಎಂ. ಸೂಗವೀರಶರ್ಮರು.
ಕನ್ನಡ ಪಂಡಿತರು, ಹಮದರ್ದ ಹೈಸ್ಕೂಲ್
ರಾಯಚೂರು.



ಓಂ ಶಿವಾಯನಮಃ

# - ರಾಯಚೂರು ಇತಿಹಾಸ -

## (Research Book.)



ಪ್ರಾಚೀನಭಾರತದ ಅತ್ಯಂತ ಶ್ರೇಷ್ಠವಾದ ಮತ್ತು ಇತಿಹಾಸಕ್ಕಿಂತಲೂ ...ಂದಿನಿಂದ ರೂಢಿಯಲ್ಲಿದ್ದ ಆದಿ ದ್ರಾವಿಡ ಮತ್ತು ದ್ರಾವಿಡ ಸಂಸ್ಕೃತಿಗೆ ನಮ್ಮ ...ಾಯಚೂರು ಸೇರಿ ಅಂದಿನಿಂದ ನಮ್ಮ ರಾಯಚೂರು ಜನರು ಪಂಚದ್ರಾವಿಡ ...ಾಷಾ ಪ್ರವೀಣರಾಗಿದ್ದಾರೆ. ನಮ್ಮ ಭಾರತದ ಭೂಗೋಳದ ದೃಷ್ಟಿಯಿಂದಪರಿಶೀಲಿಸಿ ...ಲ್ಲಿ, ತಪತಿನದಿಯಿಂದ ಹಿಡಿದು ತುಂಗಭದ್ರಾನದಿ ವರೆಗಿನ ಪ್ರದೇಶಕ್ಕೆ ಡೆಕ್ಕನ್ ...ೃಷ್ಠ ಭೂಮಿಯೆಂದು ಪ ಸಿದ್ಧ ಇತಿಹಾಸಕಾರನಾಗಿದ್ದ ವಿ. ಏ. ಸ್ಮಿತ್ ಎಂಬುವನು ...ದು, ರಾಯಚೂರು ಈ ಪ್ರಷ್ಠ ಭೂಮಿಯ ವರಪ್ರಸಾದ ವೆಂದನು.

ರಾಮಾಯಣ ಮತ್ತು ಮಹಾಭಾರತದ ಕಾಲದಲ್ಲಿ ರಾಯಚೂರು ಆರ್ಯರ ...ತ್ತು ದ್ರಾವಿಡರ ಸನ್ಮಿಶ್ರ ಸಂಸ್ಕೃತಿಗೆ ಒಳಗಾಯಿತು. ಇಡೀ ರಾಯಚೂರೆಲ್ಲಾ ...ಾಮಾಯಣ ಕಾಲದಲ್ಲಿ ದಂಡಕಾರಣ್ಯವಾಗಿತ್ತು. ಎಲ್ಲೆಲ್ಲಿನೋಡಿದರೂ ಕಲ್ಲಿನಚೂರು; ...ಂಡೆಗಳಿವೆ. ತೆಲುಗಿನಲ್ಲಿ ರಾಯಿ ಎಂದರೆ ಕಲ್ಲು ಎಂದು ಅರ್ಥ. ರಾಯಚೂರು ಎಂದರೆ ...ಲ್ಲಿನ ಬಂಡೆಗಳಿಂದ ಕೂಡಿದ ಪ್ರದೇಶ. ಶ್ರೀರಾಮನು, ಲಂಕೆಯ ರಾವಣನನ್ನು ...ಾಶಮಾಡಲು; ರಾಯಚೂರು ಮುಖಾಂತರ ತುಂಗಭದ್ರಾನದಿ ಆಶ್ರಯದ ಮಂತ್ರಾ-...ಯಕ್ಕೆ ಹೋಗಿ; ತುಂಗಭದ್ರಾನದಿ ದಡದ ಒಂದು ಬಂಡೆಯಮೇಲೆ ಕೂತು ...ಶ್ರಾಂತಿ ತೆಗೆದುಕೊಂಡ; ನಂತರ ಲಂಕೆಗೆ ಪ್ರಯಾಣ ಮಾಡಿದನೆಂಬ ಪುರಾಣ ...ಸಿದ್ಧವಾದ ಪ್ರತೀತಿಇದೆ. ಆಂಗ್ಲೇಯ ಇತಿಹಾಸಕಾರರಾಗಿದ್ದ ಪ್ರೊಫೆಸರ್; ...ಾಪ್ಸನ್; ವಿ.ಎ. ಸ್ಮಿತ್; ಥಾಂಪ್ಸನ್ ಮುಂತಾದವರು; ನಮ್ಮ ರಾಯಚೂರಿನ ...ರ್ಯ ದ್ರಾವಿಡ ಸಂಸ್ಕೃತಿಯ ವಿಷಯಗಳಿಗೆ ಗ್ರಂಥಗಳರೀತ್ಯ ಆಧಾರಪ್ರಾಯರಾಗಿ ...ಂತಿದ್ದಾರೆ.

"ರಾಯಚೂರು" ಎಂಬ ಪ್ರದೇಶದ ಹೆಸರು; ನಮ್ಮ ಭಾರತದ ಇತಿಹಾಸಕ್ಕೆ ...ೊಟ್ಟಮೊದಲು ಅಶೋಕನ ಬಂಡೆಯ ಶಾಸನಗಳಿಂದ ಅಂದರೆ ಅಶೋಕನ ರಾಕ್

ಎಡಿಕ್ಟ್ಸ ನಂಬರ್ ಎರಡು ಮತ್ತು ಮೂರನೆಯವುಗಳಿಂದ ( ಅಂದರೆ ಅಶೋಕ
ಕಲ್ಲು ಬಂಡೆಯ ನಂಬರ್ ಎರಡು ಮತ್ತು ಮೂರನೆಯ ಶಾಸನಗಳಿಂದ ) ನಮ
ತಿಳಿಯಿತು. ಅಂದರೆ, ಆ ಶಾಸನಗಳಲ್ಲಿ ರಾಯಚೂರು ಎಂಬ ಪ್ರದೇಶದ ಹೆಸ
ಕೆತ್ತಿದೆ ಎಂದು ಅರ್ಥ.

ರಾಯಚೂರಿನ ಸಮೀಪದ ಮಸ್ಕಿ ಎಂಬಲ್ಲಿ ಅಶೋಕನ ಕಾಲದ ಶಾಸನಗ
ಸಿಕ್ಕಿವೆ ಎಂದಮೇಲೆ, ಅಶೋಕನರಾಜ್ಯಭಾರಕ್ಕೆ ರಾಯಚೂರು ಪ್ರದೇಶ ಸೇರಿ ಇದನ
ಅಶೋಕನ ಪರವಾಗಿ ವೈಸ್ರಾಯ್ ಎಂಬ ಪ್ರತಿನಿಧಿ ಆಳುತ್ತಿದ್ದನೆಂದು ತಿಳಿಯಬೇಕ
ಅಶೋಕನ ಕಾಲ ಕ್ರಿ.ಪೂ. 272 - 232 ರಾಯಚೂರು ಮುಖಾಂತರ ಅಶೋಕ
ತಮ್ಮನಾದ ಮಹೇಂದ್ರನೂ, ತಂಗಿಯಾದ ಸಂಘಮಿತ್ರೆಯೂ, ಇತರ ಬೌದ್ಧ ಬಿಕ್ಷ
ಗಳೂ, ರಾಯಚೂರು ಮುಖಾಂತರ ಸಿಂಹಳಕ್ಕೆ ಹೋಗಿ ಅಲ್ಲಿ ಧರ್ಮಪ್ರಚಾ
ಮಾಡಿದರೆಂಬ ವಿಚಾರ ನಮಗೆ ಸಿಲೋನಿನ ಪ್ರಸಿದ್ಧ ಧಾರ್ಮಿಕ ಗ್ರಂಥಗಳಾದ ದೀ
ವಂಶ ಮತ್ತು ಮಹಾವಂಶ ಗಳಿಂದ ಗೋಚರವಾಗುತ್ತದೆ. ಅಶೋಕನ ಎಡಿಕ್
ನಂಬರ್ 13 ರ ಪ್ರಕಾರ ರಾಯಚೂರು ಭೌದ್ಧ ಧರ್ಮದ ಪ್ರಭಾವಕ್ಕೆ ಒಳಗಾ
ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತೆಂದುತಿಳಿಯಬೇಕು. ಈ ರಾಯಚೂರನ್ನು ಆಳುತ್ತಿದ್ದ
ವೈಸ್ರಾಯಿಗೆ ಮಹಾ ಮಾತ್ರರೆಂಬ ಮತ್ತೊಂದು ಹೆಸರಿತ್ತು. ಈ ಮೇಲ್ಕಂಡ ವಿಷಯ
ಗಳಿಗೆ ಕಲಿಕತ್ತೆಯ ಪ್ರಸಿಡೆನ್ಸಿ ಕಾಲೇಜಿನ ಇತಿಹಾಸ ವಿಭಾಗದ ಪ್ರೊಫೆಸರ್ ಆ
ಡಾ. ಹಿ.ಸಿ. ರಾಯ್. ಚೌಧರಿ ರವರ "ದಿ ಪೊಲಿಟಿಕಲ್ ಹಿಸ್ಟರಿ ಅಫ್ ಇಂಡಿಯ
ಎಂಬ ಗ್ರಂಥ ಆಧಾರವಾಗಿದೆ.



## — ವಾಕಾಟಕರು —

### ಕ್ರಿ. ಶ. 255-420

ಈ ವಾಕಾಟಕರು, ಗುಪ್ತರಹಿರಿಯರು. ಬ್ರಾಹ್ಮಣ ಧರ್ಮಕ್ಕೆ ಸೇರಿದವರು
ಇವರು ದಕ್ಷಿಣ ಭಾರತದವರೆಂದು ಡಾ|| ಎಸ್. ಶ್ರೀಕಂಠಶಾಸ್ತ್ರಿಗಳ ವಾದ. ಇವರ
ಅಚ್ಚಕರ್ನಾಟಕದವರು. ಈ ರಾಯಚೂರು; ವಾಕಾಟಕ ವಂಶದ ರಾಜರಾದ ವಿಂದ
ಶಕ್ತಿ, ಮೊದಲನೆಯ, ಪೃಥವೀಸೇನ. ಎರಡನೆಯ ರುದ್ರಸೇನ. ಶ್ರೀಮತಿ ಪ್ರಭಾವ
ಗುಪ್ತ, ಎರಡನೆಯ ಪ್ರವರಸೇನ. ಹರಿಷೇಣರ ಆಳ್ವಿಕೆಗೆ ಒಳಪಟ್ಟಿತ್ತು. ಇವರ ಕಾ
ದಲ್ಲಿ ಮತ್ತು ಭಾರಶಿವನಾಗರಕಾಲದಲ್ಲಿ ರಾಯಚೂರು ಅಚ್ಚ ಹಿಂದೂ ಸಂಸ್ಕೃತಿ

ಬೀಡಾಗಿತ್ತು. ವರ್ಣಾಶ್ರಮ ಧರ್ಮದ ಬೆಳವಣಿಗೆಗೆ ಅತಿ ಪುರಸ್ಕಾರ ಇತ್ತು. ಶೈವ ದೇವಸ್ಥಾನಗಳಿಗೆ ಶಿವಪೂಜೆಗೆ ಹೆಚ್ಚು ಪ್ರೋತ್ಸಾಹಇತ್ತು ಈ ಮೇಲ್ಕಂಡವಿಷಯುಗಳಿಗೆ "ದಿ ಇಂಡಿಯನ್ ಹಿಸ್ಟರಿ ಆಫ್ ಇಂಡಿಯನ್ ಪೀಪಲ್ಸ್ ಭಾಗ ಎರಡು. ಪಾರ್ಟ್ ಎರಡರ ಗ್ರಂಥ ಪ್ರಾಮುಖ್ಯ ಆಧಾರವಾಗಿದೆ. ಮತ್ತು ಕೆ. ಪಿ. ಜಯಸ್‌ವಾಲರ ಥರ್ಡ್ ಸೆಂಚುರಿ ಎ. ಡಿ. ಎಂಬ ಗ್ರಂಥ ಸಹಿತ ಆಧಾರವಾಗಿದೆ.



## — ಗುಪ್ತರು —

### ಕ್ರಿ. ಶ. 320-500

ಗುಪ್ತರಕಾಲದ ವಂಶಾವಳಿಯಲ್ಲಿ ಸಮುದ್ರಗುಪ್ತನು ಅತ್ಯಂತ ಪರಾಕ್ರಮ ಶಾಲಿ. ಅಲಹಾಬಾದ್ ಕೌಸಂಬಿ ಶಾಸನದ ಪ್ರಕಾರ ರಾಯಚೂರು ಗುಪ್ತರಾಜರ ಅಧೀನದಲ್ಲಿತ್ತು. ಗುಪ್ತರ ಸುವರ್ಣಯುಗದಸಂಕೇತವಾಗಿತ್ತು. ಎಂದುಹೇಳಬಹುದು. ಆರ್. ಡಿ. ಬ್ಯಾನರ್ಜಿರವರ "ದಿ. ಎಜ್. ಆಫ್‌ದಿ ಇಂಪೀರಿಯಲ್‌ಗುಪ್ತಾಸ್. ಪ್ರೊಫೆಸರ್ ರಾಧಾಕುಮುದ ಮುಖರ್ಜಿರವರ" ದಿ ಗುಪ್ತಎಂಪೈರ್;ಎಂಬ ಗ್ರಂಥ ಗಳು ಈ ಮೇಲ್ಕಂಡವುಗಳಬಗ್ಗೆ ಆಧಾರಗಳಾಗಿತನಿಂತಿವೆ. ಕ್ರಿ. ಶ. ೧೦೦ ರಿಂದ ೩೦೦ರ ವರೆಗೆ ರಾಯಚೂರು ತಮಿಳು ಸಂಸ್ಕೃತಿಯ ಸಂಗಮ ರಾಜವಂಶಾವಳಿಯ ರಾಜರ ಪ್ರಭಾವಕ್ಕೆಬೀರಿತ್ತು. ಪಲ್ಲವರಕಾಲದಲ್ಲಿಸಹಿತ ರಾಯಚೂರು ತಮಿಳುಪ್ರಭಾ ವಕ್ಕೆ ಬೀರಿತ್ತು. ಶಾತವಾಹನರ ಆಂದರೆ ಆಂಧ್ರರಕಾಲದಲ್ಲಿ (ಕ್ರಿ. ಶ. ೧೫೦-೨೨೦) ರಾಯಚೂರು ಆಂಧ್ರ ಸಾಹಿತ್ಯದಪ್ರಭಾವಕ್ಕೆ ಒಳಗಾಗಬೇಕಾಯಿತು.



## - ಕದಂಬರು -

### ಕದಂಬರು — ಕ್ರಿ. ಶ. 345-610

ಕರ್ನಾಟಕವನ್ನು ಆಳಿದಮಹನೀಯರು ಇವರಕಾಲದಲ್ಲಿ ರಾಯಚೂರಿನ ಪ್ರತಿಯೊಂದು ಹಳ್ಳಿಯನ್ನು ಗೌಡ ಮತ್ತು ಹಳ್ಳಿ ಪಂಚಾಯತಿಗಳು ನೋಡಿಕೊಳ್ಳು ತ್ತಿದ್ದರು. ಹಳ್ಳಿಪಂಚಾಯತಿಗಳಿಗೆ ಕಾರ್ಯಾಂಗ ಮತ್ತು ಶಾಸಕಾಂಗದ ಅಧಿಕಾರ ವಿತ್ತು. ಮಠಗಳಲ್ಲಿ ನಾಟ್ಯ ಪ್ರದರ್ಶನ ವಿರುತ್ತಿತ್ತು. ನಾಟ್ಯ ಕಲೆಗೆ ವಿಶೇಷ ಪ್ರೋ-

ತ್ಸಾಹ ಇತ್ತು. ಹಳ್ಳಿಯ ಪಾಠಶಾಲೆಗಳಲ್ಲಿ ಬಾಲಕರಿಗೆ ಪ್ರಾಥಮಿಕ ವಿದ್ಯಾಭ್ಯಾಸ ಏರ್ಪಾಡಾಗಿತ್ತು. ವಿಶೇಷ ಹೆಚ್ಚಿನ ವಿದ್ಯಾ ವ್ಯಾಸಂಗಕ್ಕೆ ಅಗ್ರಹಾರದ ಪಾಠಶಾಲೆಗಳಿದ್ದವು. ಘಟಿಕಗಳೆಂಬ ಕಾಲೇಜುಗಳು ಇದ್ದವು. ರಾಯಚೂರಿನ ದೇವಸ್ಥಾನಗಳಲ್ಲಿ ಪುರಾಣಗಳನ್ನೂ, ಧರ್ಮಶಾಸ್ತ್ರಗಳನ್ನೂ ಪಠನಮಾಡುತ್ತಿದ್ದರು. ಅನೇಕ ಜೈನ ಮಠಗಳು ಸ್ಥಾಪಿತವಾಯಿತು. ಎಲ್ಲಾ ಮತಗಳು ಪರಸ್ಪರ ವಿಶ್ವಾಸದಿಂದಿದ್ದವು. ಕಾಲಕ್ರಮೇಣ ಕದಂಬರಕಾಲದಲ್ಲಿ ಶೈವ ವೈಷ್ಣವ ಮತ್ತು ಜೈನಮತಗಳಿಗೆ ಕಲಹ ಉಂಟಾಗಿ ಶೈವರಲ್ಲಿ ವಿರಕ್ತರು ಒಂದುಗೂಡಿ ವಿರಶೈವಮತಪ್ರಚಾರಕರಾದರು. ಅಂದಿನಿಂದ ರಾಯಚೂರಿನಲ್ಲಿ ವೀರಶೈವಮತ ಪ್ರಸಾರ ವಾಗಲೂ ಕಾರಣವಾಯಿತು. ಆರ್. ಜಿ, ಭಂಡಾರ್ಕರ್ ಬರೆದಿರುವ "ದಿ ಹಿಸ್ಟರಿ ಆಫ್ ಡೆಕ್ಕನ್ ಮತ್ತು ಜಿ ಎಂ. ಮೊರೇಸ್ ರವರು ಕದಂಬ ಸಾಮಾಜಿಕ ವಿಷಯದಮೇಲೆ ಬರೆದಿರುವ ಗ್ರಂಥಗಳಿಂದ ಈ ಮೇಲ್ಕಂಡವಿಷಯಗಳು ತಿಳಿದುಬರುತ್ತೆ.



## .... ಬಾದಾಮಿ ಚಾಲುಕ್ಯರು ....

### ಕ್ರಿ. ಶ 550-753

ಬಾದಾಮಿ ಚಾಳುಕ್ಯರು ವಾತಾಪಿಯಲ್ಲಿ ಕರ್ಣಾಟಕರಾಜ್ಯ ಸ್ಥಾಪಿಸಿದರು. ಈ ಚಾಳುಕ್ಯರಲ್ಲಿ ಶ್ರೇಷ್ಠನಾದ ಎರಡನೆಯ ಪುಲಿಕೇಶಿ, ಐಹೊಳೆಶಾಸನದ ಪ್ರಕಾರ ಪಲ್ಲವರನ್ನು ಸೋಲಿಸಿ, ರಾಯಚೂರನ್ನು ಒಳಗೊಂಡ ಇಡೀ ದಕ್ಷಿಣ ಭಾರತವನ್ನು ಗೆದ್ದು ರಾಜನಾದನು. ಈ ಎರಡನೇ ಪುಲಿಕೇಶಿ ತನ್ನ ರಾಜ್ಯವನ್ನು ಅನೇಕ ಪ್ರಾಂತಗಳನ್ನಾಗಿ ವಿಂಗಡಿಸಿ ಪ್ರತಿಯೊಂದು ಪ್ರಾಂತಕ್ಕೂ ತನ್ನ ರಾಜ ಕುಟುಂಬದವರನ್ನು ಪ್ರತಿನಿಧಿಗಳನ್ನಾಗಿ ನೇಮಿಸಿದನು. ಆ ಪ್ರತಿನಿಧಿಗಳಲ್ಲಿಒಬ್ಬನಾದ ಪುಲಿಕೇಶಿ ಮಗನಾದ ಆದಿತ್ಯ ವರ್ಮನು. ರಾಯಚೂರನ್ನು ಆಳಲು ಶುರುಮಾಡಿದನು. ಹೂಯಿನ್‌ಸ್ಟಾಂಗ್ ಎಂಬ ಪ್ರಸಿದ್ಧ ಚೈನಾದೇಶದ ಯಾತ್ರಿಕ ಇವರ ಕಾಲದಲ್ಲಿ ರಾಯಚೂರು ಒಳಗೊಂಡ ಇಡೀ ಹೈದರಾಬಾದ್ ಪ್ರಾಂತವನ್ನೆಲ್ಲಾ ಸುತ್ತಿ ಆಗಿನ ಕಾಲದ ಅನುಭವಗಳನ್ನು ಪತ್ರಗಳಲ್ಲಿ ಬರೆದು ತನ್ನ ದೇಶಕ್ಕೆ ಹಿಂತಿರುಗಿದ್ದಾನೆ. ಆಗಿನಕಾಲದಲ್ಲಿ ವ್ಯವಸಾಯವೇ ರಾಯಚೂರಿನ ಜನಗಳ ಮುಖ್ಯ ಕಸುಬು. ಕನ್ನಡಿಗರು ಸತ್ಯವಂತರಾಗಿದ್ದರು. ನಿಗರ್ವಿಗಳು ಆದಿತ್ಯವರ್ಮ ಕ್ಷತ್ರಿಯಕುಲಕ್ಕೆ ಸೇರಿದವನು. ಎರಡನೇಪುಲಿಕೇಶಿ ನಂತರ ರಾಯಚೂರು.ಮೊದಲನೇ ವಿಕ್ರಮಾದಿತ್ಯ, ವಿನಯಾದಿತ್ಯ, ವಿಜಯಾದಿತ್ಯ, ಎರಡನೇ ಕೀರ್ತಿವರ್ಮನ ಅಧಿಕಾರಕ್ಕೆ ಒಳಪಟ್ಟಿತ್ತು. ಜೈನರಪ್ರಭಾವ ಇವರಕಾಲದಲ್ಲಿ ರಾಯ

ಚೂರಿನಲ್ಲೂ ಪ್ರಗತಿಆಯಿತು ಶಿವ, ವಿಷ್ಣು, ಬ್ರಹ್ಮ, ಸೂರ್ಯ, ದೇವತೆಗಳ ಪೂಜೆಗೆ ಪ್ರೋತ್ಸಾಹಇತ್ತು. ಶಕಈರದ ಬಳಸುವಿಕೆ ಈ ಕಾಲದಲ್ಲಿ ಹೆಚ್ಚಾಗಿತ್ತು. ಶ್ರೀ. ಸಿ. ವಿ. ವೈದ್ಯರಿಂದ ರಚಿತವಾಗಿರುವ "ದಿ.ಹಿಸ್ಟರಿ ಆಫ್ ಮೆಡಿವಲ್ ಇಂಡಿಯಾ" ಎಂಬ ಗ್ರಂಥ ಈ ಮೇಲ್ಕಂಡವಿಷಯಗಳಿಗೆ ಆಧಾರಪ್ರಾಯವಾಗಿದೆ.



## — ವೆಂಗಿಯ ಚಾಲುಕ್ಯರು —

### ಕ್ರಿ. ಶ. 605-1078 ರ ವರೆಗೆ.

ರಾಯಚೂರಿನ ಕೃಷ್ಣಾನದಿ ಪ್ರದೇಶ ಈ ವೆಂಗಿ ಚಾಲುಕ್ಯರ ರಾಜ್ಯದ ದಕ್ಷಿಣದ ಗಡಿ ಆಗಿತ್ತು. ಚೋಳರು, ರಾಯಚೂರನ್ನು ಇವರಿಂದ ಕಿತ್ತುಕೊಂಡರು. ಈ ಚಾಲುಕ್ಯದೊರೆಗಳು ಕನ್ನಡಮಾತನಾಡುತ್ತಿದ್ದರು. ಇವರಕಾಲದಲ್ಲಿ ರಾಯಚೂರು ವಿಷಯ :ಅಥವಾ ತಹಶೀಲ್ ಆಗಿತ್ತು. (Tahasil) ತಹಶೀಲ್ ಎಂದರೆ ಚಿಕ್ಕ ಪ್ರಮಾಣದ ರೆವಿನ್ಯು ಭಾಗ, ಜಿಲ್ಲೆಗಳಿಗೆ ರಾಷ್ಟ್ರ ಅಥವಾ ಭುಕ್ತಿ ಎಂದು ಹೆಸರು. ಈಗ್ಗೆ ರಾಯಚೂರುಜಿಲ್ಲೆಯನ್ನು ದೇಶಮುಖ್ ಮತ್ತು ದೇಶಪಾಂಡೆ ಎಂಬ ಅಧಿಕಾರಿಗಳು ಆಳುತ್ತಿದ್ದರು. ದೇಶಮುಖ್ ಎಂದರೆ, ಹೆಡ್ ಪಾಟೀಲ್ ಎಂದೂ, ದೇಶಪಾಂಡೆ ಎಂದರೆ ಹೆಡ್ ರೈಟರ್ ಎಂದು ಅರ್ಥ. ಇಂದೂ ಸಹ ರಾಯಚೂರಿನಲ್ಲಿ ತಹಶೀಲ್ ದೇಶಪಾಂಡೆ, ದೇಶಮುಖ, ಎಂಬ ಪದಗಳು ಬಳಿಕೆಯಲ್ಲಿವೆ.



## — ರಾಷ್ಟ್ರಕೂಟರು —

### ಕ್ರಿ. ಶ. 750-974

ರಾಷ್ಟ್ರಕೂಟರ ರಾಜವಂಶಾವಳಿಯ ಪ್ರಸಿದ್ಧರಾಜನಾದ ನಾಲ್ಕನೆಯ ದೊರಿ ದಂತಿ ದುರ್ಗನು. ಇವನು ಇಂದ್ರರಾಯನಮಗನು. ದಂತಿದುರ್ಗನ ಹೆಂಡತಿ ಚಾಲುಕ್ಯ ವಂಶದವಳು. ಹೆಂಡತಿ ಕಡೆಯಿಂದ, ನರ್ಮದಾ ಪ್ರದೇಶದಿಂದ ಹಿಡಿದು, ದಕ್ಷಿಣದ ತುಂಗಭದ್ರಾ ನದಿ ವರೆಗಿನ ಪ್ರದೇಶ (ರಾಯಚೂರು ಸೇರಿ) ಬಳುವಳಿಯಾಗಿ ದಂತಿ ದುರ್ಗನಿಗೆ ಚಾಲುಕ್ಯರಾಜನಿಂದ ಬಂದಿತು. ಇದೇ ರಾಷ್ಟ್ರಕೂಟದ ಶ್ರೇಷ್ಠ ರಾಜನಾದ ಅಮೋಘ ವರ್ಷನ ಕಾಲದಲ್ಲಿ ರಾಯಚೂರು, ಕನ್ನಡ ಸಾಹಿತ್ಯದ ಸ್ವರ್ಗವಾಗಿತ್ತು. ರಾಯಚೂರು, ಇವರಕಾಲದಲ್ಲಿ ಚಾಲುಕ್ಯ ವಂಶದ ರಾಜರ ಪದೇಪದೇ ಕರ್ನಾಟಕದ ದಂಡಯಾತ್ರೆಯ ಪರಿಣಾಮಗಳಿಗೆ ಒಳಪಟ್ಟಿತ್ತು. ಈ ಕಾಲದಲ್ಲಿ ರಾಯಚೂರಿನಲ್ಲಿ ಪತ್ತಿನಗಾಡಿ ಜನರ ಬಳಕೆಯಲ್ಲಿತ್ತು. ರಾಯಚೂರು ರಸ್ತೆ, ಬೆಟ್ಟ ಗುಡ್ಡಗಳಿಂದಲೂ;

ಕೆರೆ ಕಾಲುವೆ ಗಳಿಗೂ, ಸಿಕ್ಕಿ, ಕೆಟ್ಟು ಹೋಗಿದ್ದವು. ರೈತವಾರಿ ಜಮೀನು ಪದ್ಧತಿ ಇತ್ತು. ಬ್ರಾಹ್ಮಣರ ಹುಡುಗರು, ಮತ್ತು ವ್ಯಾಪಾರದ ಜನ ಮಾತ್ರ ವಿದ್ಯಾಭ್ಯಾಸಕ್ಕೆ ಹೆಚ್ಚು ಗಮನ ಕೊಡುತ್ತಿದ್ದರು. ರಾಷ್ಟ್ರಕೂಟ ದೊರೆಗಳು ರಾಯಚೂರನ್ನು ಬೇಟೆ ಗೋಸ್ಕರ ಜಾಗ ಮಾಡಿಕೊಂಡಿದ್ದರು.

ರಾಯಚೂರು ದೇವಸ್ಥಾನಗಳಲ್ಲಿ ನಾಟ್ಯಮಾಡುವ ಹೆಣ್ಣು ಹುಡುಗರ ಪ್ರಭಾವ ವಿಪರೀತವಾಗಿತ್ತು. ಈ ಮೇಲ್ಕಂಡ ವಿಷಯುಗಳಿಗೆ, ರಾಷ್ಟ್ರಕೂಟ ದೊರೆಗಳ ಶಿಲಾ ಶಾಸನಗಳು, ಧರ್ಮಶಾಸ್ತ್ರ; ನೀತಿಶಾಸ್ತ್ರ, ಅರ್ಥಶಾಸ್ತ್ರ, ಹೊರದೇಶದ ಯಾತ್ರಿಕ ರಾದ ವಾಟರ್ಸ್ ಆನ್‌ಯುವಾನ್ ಚಿವಾಂಗ್, ಚೈನಾ ದೇಶದ ಯಾತ್ರಿಕನಾದ ಇತ್‌ಸಿಂಗ್ ಪತ್ರಗಳು, ಅಲ್‌ಬರೂನಿ. ಯೂರೋಪ ದೇಶದ ಯಾತ್ರಿಕರಾದ ಟಾವರ್ ನೀರ್; ಬೆರ್‌ನೀರ್ ರವರ ಪತ್ರಗಳು, ಅರೇಬಿಯಾ ದೇಶದ ಯಾತ್ರಿಕರ ಪತ್ರಗಳು, ಮುಖ್ಯ ಅಧಾರಗಳಾಗಿವೆ. ಎ. ಎಸ್. ಆಲ್‌ಟೇಕರ್ ರವರ "ರಾಷ್ಟ್ರ ಕೂಟರು ಮತ್ತು ಅವರಕಾಲ" ಎಂಬ ಇಂಗ್ಲೀಷ್‌ಗ್ರಂಥಸಹ ದೊಡ್ಡ ಆಧಾರವಾಗಿದೆ.



## - ಚೋಳರು -

ಕಲ್ಯಾಣಿಯ ಸತ್ಯಾಶ್ರಯನನ್ನು ಸೋಲಿಸಿದ ಜೋಳರ ಪ್ರಖ್ಯಾತರಾಜನಾದ ರಾಜ ರಾಜನು (ಕ್ರಿ.ಶ. 985-1014)ಸತ್ಯಾಶ್ರಯನಿಂದ ರಾಯಚೂರನ್ನು ತನ್ನ ವಶಮಾಡಿಕೊಂಡು, ತುಂಗಭದ್ರವನ್ನು ತನ್ನ ರಾಜ್ಯದ ಗಡಿಮಾಡಿಕೊಂಡನು. ಇವನ ನಂತರ ಬಂದ ರಾಜೇಂದ್ರನು (ಕ್ರಿ. ಶ. 1012-1044)ಕಲ್ಯಾಣಿಯ ಚಾಲುಕ್ಯ ವಂಶದ ಎರಡನೆಯಜಯಸಿಂಹನನ್ನು ಸೋಲಿಸಿ,ಕ್ರಿ.ಶ. 1021ರಲ್ಲಿ, ರಾಯಚೂರನ್ನು ಪುನಃ ತನ್ನವಶಮಾಡಿಕೊಂಡು, ಅದನ್ನು ತನ್ನ ರಾಜ್ಯದ ಗಡಿಮಾಡಿದನು. ಒಟ್ಟನಲ್ಲಿ ರಾಯಚೂರು ಬಗ್ಗೆ, ಚೋಳರಿಗೂ, ಕಲ್ಯಾಣಿಚಾಲುಕ್ಯರಿಗೂ, ಸದೇ ಪದೇ ಯುದ್ಧ ವಾಗುತ್ತಿತ್ತು. ಇದಕ್ಕೆ, ಆಧಾರ, ಹೊಟ್ಟೂರು ಶಿಲಾ ಶಾಸನ. ರಾಜೇಂದ್ರನ ಕಲ್ಲಿನ ಶಾಸನ, ತಮಿಳು ಪ್ರಶಸ್ತಿ, ಮುಂತಾದವುಗಳು.

ಈ ಚೋಳರ ಕಾಲದಲ್ಲಿ ರಾಯಚೂರು ಸಮಾಜ ಜಾತಿ ವಿಂಗಡನೆಗಳಿಂದ ಕೂಡಿತ್ತು. ವಾಣಿಜ್ಯ ವ್ಯವಹಾರದಲ್ಲಿ ಬಲಗೈ ಮತ್ತು ಎಡಗೈ ಜಾತಿಗಳಿದ್ದವು. ದೇವದಾಸಿಯರ ಸಂಖ್ಯೆ ಇಮ್ಮಡಿಯಾಯಿತು. ಈ ದೇವ ದಾಸಿಯರಿಗೆ ಸಾಮಾಜಿಕ ಸ್ವಾತಂತ್ರ ಇತ್ತು. ಇವರು ವೇಶ್ಯಾ ವೃತ್ತಿಯಿಂದ ಹಣಸಂಪಾದಿಸಿ ನೂರಾರು ಸಂಘ ಗಳಿಗೆ ದಾನ, ಧರ್ಮ, ಮಾಡುತ್ತಿದ್ದರು. ದೇವಸ್ಥಾನಗಳು ಪಾಠಶಾಲೆಗಳಾಗಿದ್ದವು. ಪಂಚಾಯತಿಗಳು ಸಭಾಮಂದಿರಗಳಾದವು. ರಾಯಚೂರಿನ ಸುತ್ತ ಮುತ್ತಲಿನ ಹಳ್ಳಿ

ಗಳಿಗೆ "ಕೊಟ್ಟಂಗಳು" ಎಂದು ಹೆಸರಿತ್ತು. ಪಂಚಾಯತಿ ಸಭೆಗಳು, ಜಮೀನು ಕಂದಾಯ, ವಸೂಲುಮಾಡುವದು, ಕೆರೆ, ಕಾಲುವೆ ಕಟ್ಟಿಸುವದು. ಇತ್ಯಾದಿಗಳನ್ನು ನೋಡಿಕೊಳ್ಳುತ್ತಿದ್ದವು. ಪ್ರೊಫೆಸರ್ ಕೆ.ಎ. ನೀಲಕಂಠಶಾಸ್ತ್ರಿಗಳಿಂದ ರಚಿತವಾಗಿರುವ ಕೋಲಾಸ್ ಭಾಗ ಒಂದು ಮತ್ತು ಭಾಗ ಎರಡು. ಎಂಬ ಗ್ರಂಥಗಳು, ಈ ಮೇಲ್ಕಂಡ ವಿಷಯುಗಳಿಗೆ ಆಧಾರವಾಗಿದೆ.



## — ಹೊಯ್ಸಳರು —

ಕ್ರಿ. ಶ. 1300 ರಲ್ಲಿ ನರ್ಮದಾನದಿಯಿಂದ ಹಿಡಿದು ಮೈಸೂರು ವರೆಗಿನ ಪ್ರದೇಶ ರಾಜ್ಯಾಡಳಿತಕ್ಕೆ ಅನುಕೂಲಕ್ಕಾಗಿ ಹದಿನಾಲ್ಕು ಭಾಗಗಳಾಗಿ ವಿಂಗಡನೆ ಯಾಗಿತ್ತು. ಕೃಷ್ಣಾನದಿಗೆ ಉತ್ತರದ ಪ್ರದೇಶವನ್ನು ಎರಡುಭಾಗಗಳನ್ನಾಗಿ ವಿಂಗಡಿ ಸಲ್ಪಟ್ಟಿತ್ತು. ಇದೇ ಇಂದಿನ ಗುಲ್ಬರ್ಗಾ, ಮತ್ತು ಯಾದಗಿರಿ ಪ್ರದೇಶಗಳು, ಕೃಷ್ಣಾ ನದಿ ಪೂರ್ವಕ್ಕೆ ಇರುವ ಪ್ರದೇಶಗಳೆಂದರೆ ವಾರಂಗಲ್, ಕೃಷ್ಣಾನದಿಯ ಪಶ್ಚಿಮ ದಿಕ್ಕಿಗೆ ದೇವಗಿರಿಯು ಯಾದವರ ರಾಜ್ಯ. ಕೃಷ್ಣಾ ನದಿಗೆ ದಕ್ಷಿಣಕ್ಕೆ ಇರುವ ಪ್ರದೇಶ ವೇ ರಾಯಚೂರು. ಇದನ್ನು ಕ್ರಿ. ಶ. 1292 ರಿಂದ 1342 ರ ವರೆಗೆ ಹೊಯ್ಸಳ ವೀರಬಲ್ಲಾಳನು ಆಳುತ್ತಿದ್ದನು. ನಂತರ ಮುಹಮ್ಮದ್ ಬಿನ್ ತೊಗಲಕ್‌ನ ಕ್ರೌರ್ಯಕ್ಕೆ ರಾಯಚೂರುಬಲಿಯಾಯಿತು. ಈ ರಾಯಚೂರನ್ನು ಹೊಯ್ಸಳರಾದ ವಿನಯಾದಿತ್ಯ, ವಿಷ್ಣುವರ್ಧನ, ಮುಂತಾದವರು ಆಳಿದರು. ಇದಕ್ಕೆ ಆಧಾರ, ಡಾ. ಪ್ಲೀಟ್‌ರವರ ಲೇಖನಗಳು. ಈ ಕಾಲದಲ್ಲಿ ರಾಯಚೂರಿನಲ್ಲಿ ವೀರಶೈವಮತಪ್ರಚಾರ ಜೋರಾಯಿತು. ದಿವಂಗತ ಪ್ರೊಫೆಸರ್ ಎಸ್. ಕೆ ಅಯ್ಯಂಗಾರ್‌ರವರ ಎನ್‌ಷಿಯಂಟ ಇಂಡಿಯಾ ಗ್ರಂಥ ಈ ಮೇಲ್ಕಂಡ ವಿಷಯಗಳಿಗೆ ಆಧಾರವಾಗಿದೆ.

## — ವಿಜಯನಗರ ಸಾಮ್ರಾಜ್ಯ —

### ಕ್ರಿ. ಶ. 1336-1650

ಹೊಯ್ಸಳರಕಾಲವಾದಮೇಲೆ; ದಕ್ಷಿಣಭಾರತದಪರಿಸ್ಥಿತಿ ಬಿಗಡಾಯಿಸಿತು. ತುಂಗಭದ್ರಾ ಮತ್ತು ಕೃಷ್ಣಾನದಿಗಳ ದಕ್ಷಿಣಪ್ರಾಂತವನ್ನೆಲ್ಲ ಉತ್ತರದ ಮುಸ್ಲಿಂಮರು ಹಾವಳಿಮಾಡಲು ಕಾಲಸನ್ನಿಹಿತ ವಾಯಿತು. ಈ ಸಂದರ್ಭದಲ್ಲಿ ಹಿಂದೂಧರ್ಮ ಉಧ್ಧಾರಮಾಡಲು ಹಿಂದೂಗಳು ವಿಜಯುನಗರಸಾಮ್ರಾಜ್ಯ ಸ್ಥಾಪನೆ ಮಾಡಿದರು.

## ( Extract )

ಮಹಮದ್ ಬಿನ್ ತೊಗಲಖ್, ದಕ್ಷಿಣಭಾರತದ ದಂಡಯಾತ್ರೆ ಮುಗಿಸಿಕೊಂಡು, ಅಲ್ಲಾವುದ್ದೀನ್ ಹಸನ್ ಗಂಗೂ ಎಂಬುವನನ್ನು ತನ್ನ ಪ್ರತಿನಿಧಿಯನ್ನಾಗಿ ದೇವಗಿರಿ, ದೌಲತಾಬಾದ್ ಯಾದಗಿರಿ, ರಾಯಚೂರು ಪ್ರದೇಶಗಳನ್ನು ನೋಡಿಕೊಳ್ಳಲು ಬಿಟ್ಟುಹೋದನು. ಆದರೆ ಮಹಮದ್‌ಬಿನ್ ತೊಗಲಕ್ಕನ ಆಳ್ವಿಕೆ ಸರಿಬೀಳದೇ ಇದ್ದಕಾರಣ ಜನರು ದಂಗೆಎದ್ದರು. ಈ ಸಂಧರ್ಭದಲ್ಲಿ ಹಸನ್‌ಗಂಗೂ, ಜನರ ವಿಶ್ವಾಸ ಗಳಿಸಿ, ಕ್ರಿ. ಶ. 1347 ರಲ್ಲಿ ತಾನೇ ರಾಜನೆಂದೂ, ಪ್ರಣಾಳಿಕೆ ಹೊರಡಿಸಿದನು. ರಾಯಚೂರು ಅವನ ವಶಕ್ಕೆ ಹೋಯಿತು. ಇದಕ್ಕೆ ಆಧಾರ ಬುರ್‌ಹಾನ್-ಇ-ಮಸೀರ್ ಎಂಬ ಮುಸ್ಲಿಂ ಗ್ರಂಥ. ಈತನು ಉಗ್ರವಾದಿ. ರಾಯಚೂರಿನಲ್ಲಿ ಹಿಂದೂಗಳ ಕೊಲೆ ನಡೆಸಿದನು. ಇವನರಾಜಧಾನಿ ಗುಲ್ಬರ್ಗ. ಆಗ್ಗೆ ರಾಯಿಚೂರು ತನ್ನ ವ್ಯವಹಾರವನ್ನು ಗುಲ್ಬರ್ಗದೊಡನೆ ನಡೆಸಬೇಕಾಗಿತ್ತು. ಅಂದಿನಿಂದ ಸುಮಾರು 150 ವರ್ಷಗಳಕಾಲ ರಾಯಚೂರು ಬಹುಮನಿಸುಲ್ತಾನರ ಅಧಿನಕ್ಕೆಸೇರಿ ಬಹಳ ಹಿಂಸೆಪಟ್ಟಿತು. ರಾಯಚೂರಿನಲ್ಲಿ ಷಿಯ ಮತ್ತು ಸುನ್ನಿಪಂಗಡ ಬಲವಾಯಿತು. ಈ ಮೇಲ್ಕಂಡವಿಷಯುಗಳಿಗೆ ಆಧಾರ ಧಕ್ಷಿಣಭಾರತದ ದಿವಂಗತ ಪ್ರೊಫೆಸರ್ ಎಸ್. ಕೆ. ಅಯ್ಯಂಗಾರ್ ರವರಿಂದ ತಿಳಿಸಲ್ಪಟ್ಟ ಕ್ರಿ. ಶ. 1347 ರ ಮತ್ತು ಕ್ರಿ. ಶ.1492 ರ ಶಿಲಾಶಾಸನಗಳು )

ಕ್ರಿ,ಶ. 1334 ರಲ್ಲಿ ಮಹಮ್ಮದ್‌ಖಾನ್, ತೊಗಲಕ್ಕನ ಕಡೆಯುವನಾದ ಬಹಾ-ಉದ್ದಿನ್‌ಎಂಬುವನು ತೊಗಲಕ್ಕನ ಎದುರಾಗಿ ನಿಂತು ದಂಗೆಎದ್ದನು, ಈ ದಂಗೆಯನ್ನು ಅಡಗಿಸಲು ತೊಗಲ್ಲಕ್ಕನು ಬಂದನು. ಬಹಾ-ಉದ್ದೀನ್‌ಹೆದರಿ,ರಾಯಚೂರು ಜಿಲ್ಲೆಗೆಸೇರಿದ ಆನೆಗುಂದಿರಾಜನಆಶ್ರಯದಲ್ಲಿ ಮರೆಹೊಕ್ಕನು. ಇದಕ್ಕೆಕೋಪಗೊಂಡು ಆನೆಗುಂದಿರಾಜನೊಡನೆ ತೊಗಲಕ್ಕನು ಯುಧ್ಧಕ್ಕೆನಿಂತನು. ಇದಕ್ಕೆಹೆದರಿ ಆನೆಗುಂದಿ ರಾಜನು, ಬಹಾಉದ್ದೀನ್‌ನನ್ನು ಹೊಯ್ಸಳರಮೂರನೆಯಬಲ್ಲಾಳನವಶಮಾಡಿದನು. ಅವನು ತೊಗಲಕ್ಕನ ವಶಕ್ಕೆಒಪ್ಪಿಸಿದನು. ಇದಕ್ಕೆ ಬಲ್ಲಾಳನನ್ನು ತೊಗಲಕ್ಕನು ವಂದಿಸಿದನು. ಆನೆಗೊಂದಿಯನ್ನು ತೊಗಲಕ್ಕನು ತನ್ನವಶಮಾಡಿಕೊಂಡನು. ಯುದ್ಧದಲ್ಲಿ ತನ್ನನಂಬಿಕೆಗೆ ಪಾತ್ರರಾಗಿದ್ದ ಪ್ರಸಿದ್ಧ ಕುರುಬರ ವಂಶಕ್ಕೆಸೇರಿದ ಹರಿಹರ ಮತ್ತು ಬುಕ್ಕರನ್ನು ಆನೆಗುಂದಿ ಆಳ್ವಿಕೆಗೆ ಒಳಪಡಿಸಿ, ತನ್ನ ರಾಜ್ಯಕ್ಕೆಹಿಂತಿರುಗಿದನು. ಕಾಲಕ್ರಮೇಣ ಈ ಹರಿಹರ ಮತ್ತು ಬುಕ್ಕರು ಆನೆಗುಂದಿ ರಾಜನ ಖಜಾನೆ ಅಧಿಕಾರಿಗಳಾಗಿದ್ದರು. ಇವರೇ ವಿಜಯನಗರದಸ್ಥಾಪನೆಗೆ ಮೂಲಕಾರಣರು. ವಿಜಯನಗರದ ಸಂಗಮರಾಜ ವಂಶಾವಳಿಯ ಅರಸರ ಅಧೀನಕ್ಕೆ ರಾಯಚೂರು ಸೇರಿ ಇಡೀ ಸಂಗಮ ವಂಶದ ಹರಿಹರನ ಕಾಲದಲ್ಲಿ (ಕ್ರಿ.ಶ.1376-1404)ರಾಯಚೂರಲ್ಲಿ ಶೈವಮತ

ವೈಷ್ಣವ ಮತ, ಜೈನಮತ, ಒಂದಕ್ಕೊಂದು ಹೊಂದಿಕೊಂಡು ಹೋಗುತ್ತಿದ್ದವು. ಕ್ರಿ. ಶ. 1424 ರಿಂದ 1446 ರ ವರೆಗೆ, ರಾಯಚೂರು, ವೀರಶೈವದೇವರಾಯನ ಅಧೀನದಲ್ಲಿದ್ದು ವೀರಶೈವ ಸಾಹಿತ್ಯಾಭ್ಯುದಯ ಕಾಲವನ್ನು, ಅದರ ಧರ್ಮ ಪ್ರಸಾರವನ್ನು ಕಂಡಿತು. ಕನ್ನಡದ ಹೊಸವರ್ಷದ ಹಬ್ಬವಾದ ನಾಡಹಬ್ಬ, ದೀಪಾವಳಿ, ಹೋಳಿಹಬ್ಬ, ಮಹಾನವಮಿ, ಮುಂತಾದವುಗಳು. ರಾಯಚೂರು, ದೇವದುರ್ಗ, ಗದ್ವಾಲ್, ಯಾದಗಿರಿ, ಮುಂತಾದ ಕರ್ಣಾಟಕ ಪ್ರದೇಶದಲ್ಲಿ ಅತಿ ವಿಜೃಂಭಣೆಯಿಂದ ನಡೆಯುತ್ತಿದ್ದವು. ರಾಯಚೂರಿನ ಕೃಷ್ಣಾನದಿ ಆಶ್ರಯದಲ್ಲಿರುವ ಹಟ್ಟಿ ಗಣಿ ಪ್ರದೇಶ ಈ ದೇವರಾಯನ ಕಾಲದಲ್ಲಿ ಬಹಳ ಪ್ರಗತಿ ಪಡೆದಿತ್ತು. ಪ್ರಭುಲಿಂಗಲೀಲೆ, ಪಠನ, ಬಸವ ಜಯಂತಿ ಉತ್ಸವ. ಲಕ್ಕಣ್ಣನ ಶಿವಚಿಂತಾಮಣಿ, ಮಹಾಲಿಂಗದೇವನ ಏಕೋತ್ತರ ಷಟ್‌ಸ್ಥಲ, ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ, ಚಂದ್ರಕವಿಯ ವಿರೂಪಾಕ್ಷಸ್ಥಾನ, ಕಲ್ಲಮಠದ ಪ್ರಭುದೇವನ ಲಿಂಗಲೀಲೆ ವಿಲಾಸ ಚರಿತ್ರೆ, ಕರಸ್ಥಳದ ನಾಗದೇವನ ತ್ರಿಪದಿ, ಮುಗ್ಗಿಯ ಮಾಯಿದೇವನ ಅನುಭವಸೂತ್ರ ಮುಂತಾದ ಗ್ರಂಥಗಳು. ರಾಯಚೂರು ಜನರನ್ನು ಸಾಹಿತ್ಯ ಪ್ರಿಯರನ್ನಾಗಿ ಮಾಡಿದವು. ಚಿನ್ನ, ಬೆಳ್ಳಿ, ತಾಂಬ್ರದ ನಾಣ್ಯಗಳು ಬಳಕೆಯಲ್ಲಿದ್ದವು. ಚಿನ್ನದ ನಾಣ್ಯಗಳಿಗೆ ವರಾಹ, ಪ್ರತಾಪ, ಪನಂ ಎಂದೂ, ಬೆಳ್ಳಿ ನಾಣ್ಯಗಳಿಗೆ ತಾರ್ ಎಂದೂ, ತಾಂಬ್ರದ ನಾಣ್ಯಗಳಿಗೆ ಜಿತಲ್ ಎಂದೂ ಹೆಸರಿತ್ತು.

ಚಿತ್ರಕಾರರಮೇಲೆ, ಅಗಸರಿಗೆ, ನೇಯಿಗೆ, ನಾಯಿಂದ, ಮುಂತಾದವರಿಗೆ ಕಾಕಲಾಗಿತ್ತು ಮೆಣಸು, ಕಸ್ತೂರಿ, ಅರಿಸಿನ, ಎಳ್ಳು, ಹರಳುಗಿಡ, ಅಡಿಕೆ, ಮುಂತಾದವುಗಳಮೇಲೆ ತೆರಿಗೆವಿಧಿಸಲಾಯಿತು. ಗಂಡಸರೂ, ಮತ್ತು ಹೆಂಗಸರೂ ಒಂದೇತರಹದ ಆಭರಣಗಳನ್ನು ತೊಡುತ್ತಿದ್ದರು. ಓಲೆಗರಿಲೇಖನಗಳು ಬಳಕೆಯಲ್ಲಿದ್ದವು. ಕಳ್ಳರನ್ನು ಮತ್ತು ಅಪರಾಧಿಗಳನ್ನು, ಆನೆಯ ಬಾಯಿಗೆ ತುತ್ತುಮಾಡುತ್ತಿದ್ದರು. ರಾಯಚೂರಿನವರ್ತಕರು ಬಾಳೆಗಿಡ, ತೆಂಗಿನಕಾಯಿ, ಮೆಣಸು, ಮುಂತಾದವುಗಳಿಗೆ ತೆರೆಗೆಕೊಡಬೇಕಾಗಿತ್ತು. ಹೂಗಳಮೇಲೆ ತೆರಿಗೆವಿಧಿಸಲಾಗಿತ್ತು. ವೀರಶೈವ ದೇವರಾಯನನಂತರ ರಾಯಚೂರು ಶಿವಶರಣಮಲ್ಲಿಕಾರ್ಜುನ, ಮತ್ತು ವಿರುಪಾಕ್ಷ ಎಂಬ ವೀರಶೈವ ವಿಜಯನಗರದ ಅರಸರ ಆಳ್ವಿಕೆಗೆಸೇರಿತು. ಈ ಕಾಲದಲ್ಲಿ ಅಂದರೆ ಕ್ರಿ. ಶ. 1446 ರಿಂದ 1487 ರವರೆಗೆ ಇಡೀರಾಯಚೂರುಜಿಲ್ಲೆಯಲ್ಲಿ ವೀರಶೈವ ಧರ್ಮದಪ್ರಚಾರ ಖ್ಯಾತಿಪಡೆಯಿತು. ನೂರಾರುವೀರಶೈವಮಠಗಳು ಸ್ಥಾಪಿತವಾಯಿತು. ವೀರಶೈವಸಾಹಿತ್ಯದ ಪ್ರಚಾರ ಅಧಿಯಾಯಿತು. ಅಕ್ಕಮಹಾದೇವಿ, ಪ್ರಭುದೇವರವಚನ, ಬಸವಜಯಂತಿಗಳಿಗೆ ಬಹಳಪ್ರೋತ್ಸಾಹ ಇತ್ತು.

ಒಟ್ಟಿನಲ್ಲಿ ವಿಜಯನಗರದ ಸಂಗಮರ ರಾಜರುಗಳಕಾಲದಲ್ಲಿ ( ಅಂದರೆ

ಕ್ರಿ. ಶ.1346 ರಿಂದ 1485 ) ರಾಯಚೂರಿನಜನರು ಬಹಳಧರ್ಮಾಭಿಮಾ
ಗಳಾದ್ದರು. ದೈವಭಕ್ತಿಉಳ್ಳವರಾಗಿದ್ದರು. ರಾಯಿಚೂರಿನ ಯಾತ್ರಿಕರು ವರ್ಷಕ್
ಒಂದುಸಾರೆ, ವಿಜಯ-ನಗರಕ್ಕೆಹೋಗಿ ಪಂಪಾಪತಿ ಅಥವಾ ವಿಜಯನಗರದವಿರುಪಾ
ದೇವಸ್ಥಾನಕ್ಕೆ ಭೇಟಿಕೊಟ್ಟು ದೈವಭಕ್ತಿಗೆ ಪಾತ್ರರಾಗುತ್ತಿದ್ದರು. ಜನರಲ್ಲಿ ವಿಶೇ
ವಾಗಿ ಕನ್ನಡಭಾಷೆ ಬಳಕೆಯಲ್ಲಿತ್ತು. ತೆಲುಗು, ಮತ್ತು ತಮಿಳು, ಗ್ರಂಥಗಳ

ಸಹ ರಾಯಚೂರಿನ ಜನರು ಗಮನವೀಯುತ್ತಿದ್ದರು. ಶಿವದೇವಾಲಯ ಗೋಡೆಗ
ಮೇಲೆ, ಪುರಾಣಕ್ಕೆ ಸಂಬಂಧಪಟ್ಟ ಕಥೆಗಳನ್ನು ಬರೆಯುವ ಪದ್ಧತಿಇತ್ತು. ಶಿವದೇವ
ಲಯಗಳ ಮೇಲ್ವಿಚಾರಣೆಗೆ ಪಾರಪತ್ಯಗಾರ ನೆಂದೂ, ದೇವಸ್ಥಾನದ ಖಜಾನೆ
ಶ್ರೀ ಭಂಡಾರವೆಂದೂ, ಕರೆಯಲಾಯಿತು. ಹಳ್ಳಿ ದೇವತೆಗಳಾದ ಮಾರಿ, ದುರ್ಗ
ಜಾತ್ರೆಗಳು ಹೆಸರುವಾಸಿಯಾದವು. ಗ್ರಾಮದೇವರುಗಳು ಮತ್ತು ದೇವತೆಗಳ ಜಾತ್ರೆ
ಬಹಳ ಬಳಕೆಯಲ್ಲಿದ್ದವು. ದೇವದುರ್ಗ, ಯಾದಗಿರಿ, ರಾಯಚೂರಿನ ಸುತ್ತಮುತ್ತಲಿ
ದೇವತೆಗಳ ಜಾತ್ರೆ ಹೆಸರುವಾಸಿಯಾಯಿತು.

(Extract)

(ಕರ್ನೂಲು ಶಿಲಾಶಾಸನ (V R. i· e· Kurn No. 516) ರ ಪ್ರಕಾ
ಕ್ರಿ ಶ. 1492-93 ರಲ್ಲಿ ಇಮ್ಮಡಿ ನರಸಿಂಹನ ಅಧಿಕಾರದಲ್ಲಿ ರಾಯಚೂರ
ಇತ್ತು. ಈ ವರ್ಷದಲ್ಲೇ ಬಿಜಾಪುರದ ಯೂಸುಫ ಆದಿಲ್ ಷಾ, ಇಮ್ಮಡಿ ನರಸಿಂಹ
ಸೇನೆ ಸೋಲಿಸಿ, ದಕ್ಷಿಣ ಭಾರತದ ದಂಡೆಯಾತ್ರೆಮಾಡಿ, ರಾಯಚೂರು ಮೂಡಗಲ
ಗಳನ್ನು ತನ್ನ ವಶಮಾಡಿಕೊಂಡನು. ರಾಯಚೂರಿನಲ್ಲಿ ನರಸಿಂಹನ ಮಗನು ಗುಂಡಿ
ಹೊಡೆತಕ್ಕೆ ಬಿದ್ದು ರಾಯಚೂರು ಕದನದಲ್ಲಿ ಮಡಿದನು.)

ಕ್ರಿ. ಶ. 1485 ರಿಂದ 1493ರ ವರೆಗೆ ರಾಯಚೂರು, ಸಾಲು
ನರಸಿಂಹನ ಅಧಿಕಾರದ ಪ್ರಭಾವಕ್ಕೆ ಒಳಗಾಯಿತು. ಆದರೆ ಕೆಲವುಕಾಲದ ಒಳ
ರಾಯಚೂರು, ಬಿಜಾಪುರದ ಆದಿಲ್‌ಷಾ ಗೆ ಸೇರಿತು. ಕಾಲಕ್ರಮೇಣ ಬಿಜಾಪುರ
ಸುಲ್ತಾನನ ಆಧೀನ ರಾಜನಾದ ಕಾಸಿಂ ಬರೀದ್ ತುರ್ಕ, ದೊಡ್ಡ ಬಿಜಾಪುರ
ರಾಜ್ಯವನ್ನು ಕಟ್ಟಲು, ಅಪೇಕ್ಷಿಸಿ, ವಿಜಯನಗರದ ನರಸನಾಯಕನಿಗೆ ಈ ಕೆಳ
ಕಂಡಂತೆ ಕಾಗದ ಬರೆದನು.

ನರಸನಾಯಕ ! ನೀನು ನಮ್ಮ ಬಿಜಾಪುರದ ಆದಿಲ್ ಷಾ ಗೆ ಯೂಸು
ಆದಿಲ್‌ಖಾನ್‌ನ ಭಯ ತಪ್ಪಿಸಿದರೆ ಆದಿಲ್ ಷಾ ರಾಯಚೂರು ಕೋಟೆಯನ್ನು ನಿ
ವಶಕ್ಕೆ ಕೊಡುವನು. ಇದಕ್ಕಾಗಿ ನಿನ್ನ ಉತ್ತರವೇನು ?

ಇದಕ್ಕೆ ನರಸನಾಯಕನ ಪರವಾಗಿ ತಿಮ್ಮರಾಜನು, ತುಂಗಭದ್ರಾನದಿ ದಾ

ರಾಯಚೂರು ಪ್ರದೇಶವನ್ನು ಮುತ್ತಿದನು. ಯೂಸಫ್ ಆದಿಲ್ ಖಾನ್‌ನು ತಿಮ್ಮರಾಜನ ಬಲಮುರಿಯಲು ಸಾಧ್ಯವಾಗಲಿಲ್ಲ. ತಿಮ್ಮರಾಜನೊಡನೆ ಸಂಧಿ ಮಾಡಿಕೊಳ್ಳಬೇಕಾಯಿತು. ಫೆರಿಸ್ತಾ ಪ್ರಕಾರ, ವಿಜಯನಗರದಲ್ಲಿ ಅಂತರ್ಯುದ್ಧದ ವರ್ತಮಾನ ಕೇಳಿದ ತಕ್ಷಣ ರಾಯಚೂರನ್ನು ಪುನಃ ತನ್ನ ವಶಮಾಡಿಕೊಳ್ಳಲು ಯೂಸುಫ್ ಆದಿಲ್ ಷಾ ಯೋಚಿಸಿ, ಕೃಷ್ಣಾನದಿದಡದವರೆಗೆ ಬಂದು, ಬಹಳ ಬಳಲಿ, ಬೇಟೆಯಾಡಿದಫಲವಾಗಿ, ವಿಶೇಷ ಆಯಾಸ ಗೊಂಡು, ಎರಡು ತಿಂಗಳಕಾಲ ಜ್ವರದಿಂದ ಬಿದ್ದು, ಹಾಸಿಗೆ ಮೇಲಿಂದ ಏಳಲೇ ಇಲ್ಲ. ಈ ಸಂಧರ್ಭನೋಡಿ ಯೂಸುಫ್ ಆದಿಲ್ ಖಾನ್‌ಗೆ ಬಹಳ ಭಯವಾಯಿತು. ಆದಷ್ಟು ಅವನಿಗೆ ರೋಗವಾಸಿಯಾಗಲೆಂದು, ಅವನ ಅನುಯಾಯಿಗಳಿಂದ ಪ್ರಾರ್ಥನೆಯಾಯಿತು.

ಅಷ್ಟರಲ್ಲಿ ತಿಮ್ಮರಾಜನು ತುಂಗಭದ್ರಾನದಿ ದಾಟಿ, ಬಿಜಾಪುರ ಮುತ್ತಿ, ಹಿಂತಿರುಗುವ ವೇಳೆಯಲ್ಲಿ ಯೂಸುಫ್ ಆದಿಲ್ ಖಾನ್ ತನ್ನ ರಾಯಭಾರಿಯನ್ನು ಕಳುಹಿಸಿ "ತಿಮ್ಮರಾಯ" ನಾವು ನಿಮ್ಮೊಡನೆ ಒಪ್ಪಂದಕ್ಕೆ ಬರುತ್ತೇವೆ. ನಮ್ಮ ಕಪ್ಪ ಕಾಣಿಕೆಗಳನ್ನು ಸ್ವೀಕರಿಸಲು ನಮ್ಮಲ್ಲಿಗೆ ಬರಬೇಕೆಂದು ಆಹ್ವಾನಿಸಿದನು. ಇದಕ್ಕೆ ಒಪ್ಪಿ, ಮುನ್ನೂರು ಹಿಂಬಾಲಿಕರೊಡನೆ ತಿಮ್ಮರಾಜನು, ವಿಜಯನಗರದ ಬಾಲಕ ರಾಜನಾಗಿದ್ದ ನರಸನಾಯಕನೊಡನೆ ಬಿಜಾಪುರಕ್ಕೆ ಬಂದು "ಸಭೆಯಲ್ಲಿ ಯೂಸುಫ್ ಆದಿಲ್ ಖಾನ್ ನೊಡನೆ ಚರ್ಚೆ ನಡೆಸುತ್ತಿದ್ದಾಗ, ಆದಿಲ್ ಖಾನ್ ಕಣ್ಣು ಮಿಟಕಿಸಿದ ತಕ್ಷಣ ಅವನ ಸೇನೆ ತಿಮ್ಮರಾಯನ ಮೇಲೆ ಬಿದ್ದು", ಅವನ ಹಿಂಬಾಲಿಕರ ರಕ್ತವನ್ನು ಹೀರಿ ಕುಡಿದರು. ನರಸನಾಯಕ ಈ ಕದನದಲ್ಲಿ ಗಾಯಗೊಂಡು ಸತ್ತು ಹೋದನು "ತಿಮ್ಮರಾಯನ ಎಪ್ಪತ್ತು ಹಿಂಬಾಲಿಕರು ಸತ್ತುಹೋದರು. ನಂತರ ಸಂತೋಷಗೊಂಡ ಯೂಸುಫ್ ಆದಿಲ್ ಖಾನನು, ರಾಯಚೂರಿಗೆ ಬಂದು ಅನೇಕ ಹಿಂದೂಗಳನ್ನು ಮುಸ್ಲಿಂ ಮತಕ್ಕೆ ಸೇರಿಸಿ, ರಾಯಚೂರಿನ ಜನರಿಂದ ಕೊಳ್ಳೆಹೊಡೆದು ರಾಯಚೂರಿನ ಕೋಟೆಯನ್ನು ಹಾಳುಮಾಡಿ ಅನೇಕ ಸ್ತ್ರೀಯರ ಮಾನಾಪಹರಣ ಮಾಡಿ ರಾಯಚೂರಿನಲ್ಲಿ ಇಸ್ಲಾಂ ಧರ್ಮವನ್ನು ಪ್ರಸಾರ ಮಾಡಿದನು. ಇವತ್ತು ನಮ್ಮ ರಾಯಚೂರು ಹವಾಲ್ದಾರ್ ಹೈಸ್ಕೂಲಿನ ಹತ್ತಿರ ಇರುವ, ನವರಂಗದರವಾಜದ ಗೋಡೆಗಳ ಮೇಲೆ ವ್ಯಭಿಚಾರದ ದುಷ್ಕೃತ್ಯಗಳ ಚಿತ್ರಗಳು ಇವೆ. ಇವೆಲ್ಲವೂ, ಸಹ ಬಹಮನಿ ಸುಲ್ತಾನರು ರಾಯಚೂರನ್ನು ಮುತ್ತಿದಾದ ನಡೆದ ಕೆಲಸಗಳು, ಈ ಮೇಲ್ಕಂಡ ವಿಷಯಗಳು ಕ್ರಿ. ಶ. 1489 ರಿಂದ 1493 ರ ವರೆಗೆ ನಡೆಯಿತು. ಈ ಮೇಲ್ಕಂಡ ವಿಷಯಗಳಿಗೆ ಆಧಾರ 'ನ್ಯೂನಿಜ್' ಕ್ರಿ. ಶ. 1493 ರ ಎರಡನೇ ನರಸಿಂಹನ ಮೊದಲನೇ ಪತ್ರ (ಕ್ರಿ. ಶ. 1414 ಕೋಲಾರ ನಂಬರ್ 34) ಕ್ರಿ. ಶ. 1493 ರ ಜನವರಿ 27 ತಾರೀಖಿನ ಪತ್ರ (ಮೂಡುಗೆರೆ ನಂಬರ್ 54 ಮತ್ತು 56). ಕ್ರಿ. ಶ. 1493 ಡಿಸೆಂಬರ್ 18 ರ ಪತ್ರಗಳು (ದೊಡ್ಡ ಬಳ್ಳಾಪುರ

ನಂಬರ್ 42 ಮತ್ತು 48).

ಇಮ್ಮಡಿ ನರಸಿಂಹನ ಆಳ್ವಿಕೆಗೂ, ಕ್ರಿ. ಶ. 1506 ರಿಂದ 1509ರ ವರೆಗೆ, ವೀರನರಸಿಂಹನ ಆಳ್ವಿಕೆಗೂ, ಒಳಪಡಲು ಸಾಧ್ಯವಾಗಲಿಲ್ಲ ವೀರನರಸಿಂಹನು ಕೃಷ್ಣದೇವರಾಯನ ಅಣ್ಣನು. ವಿಜಯನಗರದ ಸೋಮದೇವರಾಜನ ಕಾಲದಲ್ಲಿ, ವೆಂಕಯ್ಯನೆಂಬ ಪ್ರಸಿದ್ಧ ಕವಿ, ತೆಲುಗಿನಲ್ಲಿ " ರಾಮರಾಜಿಯಮು " ಎಂಬಗ್ರಂಥ ಬರದಿದ್ದಾನೆ. ಈ ಗ್ರಂಥದಪ್ರಕಾರ, ಸೋಮದೇವರಾಜನು ಮಲ್ ಬಾರ್ ನಾಯಕ, ರುದ್ರಪ್ಪ, ಗೌಡರೆಡ್ಡಿ, ಗಂಗಿನಾಯಕ, ಮುಂತಾದ ಪಾಳೆಯಗಾರರನ್ನು ಸೋಲಿಸಿ, ಬಹುಮನಿ ಸುಲ್ತಾನನಾದ ಮಹಮ್ಮದನನ್ನು ಸೋಲಿಸಿ ಸೆರೆಹಿಡಿದನು. ಆದರೆ ಆ ಸುಲ್ತಾನನು,ತನ್ನಕ್ಷಮಾಪಣೆಬೇಡಿ ಆರುಸಾವಿರಕುದುರೆಗಳನ್ನು ಇನಾಮುಮಾಡಿದನು ಸೋಮದೇವರಾಜನು, ರಾಯಚೂರು ಕೋಟೆಯನ್ನು ತನ್ನ ವಶಮಾಡಿಕೊಂಡನು.

ನಂತರ ಈತನು " ವೀರಕ್ಷೇತ್ರಭಾರತಿಮುಖ " ಎಂಬಬಿರುದನ್ನು ಸಂಪಾದಿಸಿದನು. ಸೋಮದೇವರಾಜನ ಕಾಲನಿರ್ಣಯವಾಗಿಲ್ಲ.

ನಾದಿಮಲ್ಲಣ್ಣ ಮತ್ತು ಸಿಂಗಯ್ಯರವರಿಂದರಚಿತವಾದ ತೆಲುಗುಗ್ರಂಥವಾದ " ವರಾಹಾಪುರಾಣಂ "ಪ್ರಕಾರ ನರಸನಾಯಕನು, ಉದಯಗಿರಿ, ರಾಯಚೂರು, ಮುಂತಾದವುಗಳನ್ನು ತನ್ನವಶಮಾಡಿಕೊಂಡನು. ಈ ನರಸನಯಕನಪ್ರತಿಭೆಯನ್ನು ಬೀದರ್ ಮತ್ತು ರಾಯಚೂರಿನ ಜನಗಳು ಬಹಳಕೊಂಡಾಡಿದಂತೆ ಈ ಗ್ರಂಥತಿಳಿಸುತ್ತದೆ.

ರಾಜನಾಥ ದಿಂಡಿಮನಶ್ರೇಷ್ಟವಾದ ತೆಲುಗು ಗ್ರಂಥದಪ್ರಕಾರ ಸಾಲುವನರಸಿಂಹ ಮುಸ್ಲಿಂಸೇನೆಯೊಡನೆಯುದ್ಧಮಾಡಬೇಕಾಯಿತು. ಡೆಕ್ಕನ್ ಮುಸ್ಲಿಂಮರನ್ನು ಸೋಲಿಸಿ ಧರಣೀವರಾಹ ಮತ್ತು ಸಲುವೇಂದ್ರ ಎಂಬ ಬಿರುದನ್ನು ಸಂಪಾದಿಸದನು. ರಾಯಚೂರು,ಸಾಲುವನರಸಿಂಹನಕಾಲದಲ್ಲಿ ಶಾಂತರೀತಿಯಲ್ಲಿತ್ತು. ಜನಗಳು ನೆಮ್ಮದಿಯಿಂದಇದ್ದರು ಸಾಲುವನರಸಿಂಹನು ಅನೇಕಕವಿಗಳಿಗೆಉದಾರಆಶ್ರಯ ನೀಡಿದ್ದನು ಧರ್ಮಕ್ಕೆ ಗೌರವ ತೋರಿಸಿದನು. ಈತನಕಾಲದಲ್ಲಿ ರಾಯಚೂರು ಒಳಗೊಂಡ ಇಡೀ ಕರ್ನಾಟಕದಲ್ಲಿ ಶಿವರಾತ್ರಿಹಬ್ಬ ಬಹಳಚೆನ್ನಾಗಿಆಚರಣೆಯಲ್ಲಿತ್ತು.

ನಂದಿತಿಮ್ಮಣ್ಣನಿಂದ ರಚಿತವಾದ ತೆಲುಗು ಗ್ರಂಥವಾದ " ಪಾರಿಜಾತಪ್ರಹರಣಮು " ಪ್ರಕಾರ, ನರಸನು ಸೂರ್ಯವಂಶಕ್ಕೆಸೇರಿದವನು. ಈತನತಂದೆ ಈಶ್ವರ; ತಾಯಿ ಲಕ್ಕಾಂಬ ಈತನು ದೈವದತ್ತವಾದಯುದ್ಧವೀರ. ಈತನು ವಿಜಯನಗರದಸಿಂಹಾಸನಹತ್ತಿಬಹಮನಿಸುಲ್ತಾನರನ್ನುಮಾನವದುರ್ಗದಕದನದಲ್ಲಿಸೋಲಿಸಿ ವಿಜಯನಗರ ರಕ್ಷಣೆಮಾಡಿದನು. ಈತನಕಾಲದಲ್ಲಿ ರಾಯಚೂರು ಕ್ಷೇಮದಿಂದಇತ್ತು

ಈತನಿಗೆ ಇಬ್ಬರು ಪತ್ನಿಯರಿದ್ದರು. ತಿಪ್ಪಾಂಬ, ಮತ್ತು ನಾಗಾಂಬ, ಎಂಬುವರು. ಇವರಿಗೆ ವೀರನರಸಿಂಹ ಮತ್ತು ಕೃಷ್ಣರಾಯರೆಂಬ ಇಬ್ಬರುಗಂಡುಮಕ್ಕಳು ಜನಿಸಿದರು. ಕೃಷ್ಣರಾಯನಿಂದ ರಚಿತವಾದ ಆಮುಕ್ತಮಾಲಯದ ಪ್ರಕಾರ, ವೀರನರಸಿಂಹನು; ಕೈಬಿಟ್ಟು ಹೋದರಾಜ್ಯವನ್ನು ಗೆದ್ದು ಕವಿಗಳಿಗೆ ಆಶ್ರಯದಾತನಾಗಿದ್ದನು. ಇವನ ಕಾಲದಲ್ಲಿ ರಾಯಚೂರು ಸುಖದಿಂದ ಇತ್ತು.

ಕ್ರಿ: ಶ. 1509 ರಿಂದ 1530ರ ವರೆಗೆ ವಿಜಯನಗರಸಾಮ್ರಾಜ್ಯ ಕೃಷ್ಣದೇವರಾಯನ ಆಳ್ವಿಕೆಗೆ ಒಳಪಟ್ಟಿತು. ಮುಸ್ಲಿಂಇತಿಹಾಸಕಾರರಾದ ಫೆರಿಸ್ತಾಮತ್ತು ತಬಾತಬಾ, ವಿಜಯನಗರ ಮತ್ತು ಬಹುಮನಿಸುಲ್ತಾನರ, ಪರಸ್ಪರ ಸ್ನೇಹಿತತ್ವ ವನ್ನು ವೈಷಮ್ಯವನ್ನು ಮೊದಲಿನಿಂದಲೂ, ಕೊನೆಯವರೆಗೂ, ವ್ಯಕ್ತಪಡಿಸುತ್ತಾರೆ. ತಬಾತಬಾ, ಇವರೀರ್ವರಯುದ್ಧವನ್ನು (Jihads) ಅಥವಾ ಹೋಲಿಕದನಗಳೆಂದು ಕರೆಯುವರು. ವಿಜಯನಗರದ ರಾಯರನ್ನು “The chiefs of the lords of hell ” ಎಂದು ಅಸೂಯೆಯಿಂದ ಕರೆದಿದ್ದಾರೆ. ಒಟ್ಟಿನಲ್ಲಿಇವರೀರ್ವರು, ಕೃಷ್ಣ ದೇವರಾಯನಕಾಲದ ರಾಯಚೂರುಕದನಕ್ಕೆ, ಆಧಾರಪ್ರಾಯರಾಗಿ ನಿಂತಿದ್ದಾರೆ. ಹೊರದೇಶದ ಯಾತ್ರಿಕರಾದ ಇಬನ್‌ಬಟೂಟ್, ನಿಕಲೋಕೊಂಟಿ, ಅಬ್ದುರ್‌ರಜಾಕ್ ಪ್ಲೆಯರ್‌ಲೂಯಿಸ್, ಸೀಸರ್‌ಫ್ರೆಡರಿಕ್, ಜಿಸೂಯಿತಪಾದ್ರಿಗಳು; ಫಾದರ್‌ಬರ್ರಿ ಡಾಸ್, ಮುಂತಾದವರು. ಈ ರಾಯಚೂರು ಚರಿತ್ರೆಗೆ ಆಧಾರವಾಗಿನಿಂತು, ಕೃಷ್ಣ ದೇವರಾಯನ ಮತ್ತು ಅಚ್ಚುತರಾಯನಕಾಲದ ಕದನದಸ್ಥಿರಕ್ಕೆ ಖಚಿತವಾದ ಆಧಾರ ಪ್ರಾಯರಾಗಿನಿಂತಿದ್ದಾರೆ. ಕೃಷ್ಣದೇವರಾಯನಿಂದ ರಚಿತವಾದ ಆಮುಕ್ತಮಾಲಯದ ಎಂಬಗ್ರಂಥದಪ್ರಕಾರ, ರಾಯಚೂರು ಕದನ ಸ್ಥಿರಪಟ್ಟಿದೆ, ಮತ್ತು ನಿರಂತರ ಇತಿ ಹಾಸಪ್ರದಾಯಕವಾಗಿದೆ, ಎಂಬುದಾಗಿ ತಿಳಿಯಬಹುದು. ಎಲ್ಲದಕ್ಕಿಂತಲೂ, ಕೃಷ್ಣ ದೇವರಾಯನಕಾಲದ, ರಾಯಚುರು ಕದನಕ್ಕೆ ಈ ಕೆಳಗಿನಕಂಡಪತ್ರ, ಬಹುಮುಖ್ಯ ಆಧಾರವಾಗಿನಿಂತಿವೆ.

( 1 ) Record in Tirukkadaiyur. ಈ ತಿರುಕ್ಕಡೆಯ್ಯಾರ್, ಎಂಬಹಳ್ಳಿಯಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಇವನಹೆಸರು ( Apatsahaya ಅಪಾತ್ಸಹಾಯ. ರಾಯಚೂರಿನ ಶಿವದೇವಾಲಯ ಈತನು ರಿಪೇರಿಮಾಡಿಸಿ, ರಾಯ ಚೂರಿನಲ್ಲಿ, ಕೃಷ್ಣದೇವರಾಯನ ಪಾತ್ರವಹಿಸಿ, ಗೆದ್ದನೆಂದು ತಿಳಿಸಿದ್ದಾನೆ, ಈ ಪತ್ರಕ್ಕೆ ತಿರುಕ್ಕಡೆಯಾರ್ ಪತ್ರವೆಂದುಹೆಸರು. ಪೋರ್ಚ್‌ಗೀಸ್ ಕ್ರಾನಿಕಲ್‌ಗಳೂ' ಸಹಿತ ಇದಕ್ಕೆ ಪುಷ್ಟಿಕೊಟ್ಟು ಆಧಾರವಾಗಿ ನಿಂತಿವೆ. ರಾಯಚೂರು ಕದನದವಿಷಯ ತಿಳಿಯುವ ಮುನ್ನ ಬಹುಮನಿಸುಲ್ತಾನರ ರೀತಿಮುಂಚೆತಿಳಿಯೋಣ !

ಮಹಮ್ಮದ್ ಗವಾನ್, ಮಡಿದನಂತರ ಬಹುಮನಿಸುಲ್ತಾನರ ದಕ್ಷಿಣ

ಭಾರತದಲ್ಲಿ ಪ್ರಾಬಲ್ಯಕುಂದುಹೋಯಿತು. ಕ್ರಿ. ಶ. 1482 ರಿಂದ 1517
ವರೆಗೆ ಮಹಮ್ಮದ್ ಷಾ ಬಹಮನಿ ಆಳುತ್ತಿದ್ದನು, ಇವನ ಆಳ್ವಿಕೆ, ಸಾಮಾನ್ಯವಾ
ದ್ದು ಕ್ರಿ. ಶ. 1504 ರಲ್ಲಿ ಬಿಜಾಪುರದ ಸುಲ್ತಾನನಿಗೆ ಸಹಾಯಕನಾಗಿದ್ದ ಕಾಸಿ
ಬರೀದ್ ಸತ್ತನು. ನಂತರ ಅವನ ಮಗ ಅಮೀರ್ ಬರೀದ್ ಸಿಂಹಾಸನಕ್ಕೆ ಬಂದನ
ಇವನು ದೊಡ್ಡ ಬಿಜಾಪುರದ ರಾಜ್ಯಕಟ್ಟಲು ಹವಣಿಸುತ್ತಾ ಇದ್ದನು. ಈ ಸಂದರ್ಭ
ದಲ್ಲಿ ಬಹಮನಿಯ ಬಿಜಾಪುರದ ಪಂಚ ಸುಲ್ತಾನರಲ್ಲಿ ಹೆಸರು ವಾಸಿಯೂ, ಮತ
ಪ್ರಬಲನಾಗಿದ್ದ ಯೂಸುಫ್ ಅಲಿ ಆದಿಲ್ ಷಾ, ಗುಲ್ಬರ್ಗಾ ಮತ್ತು ಅದರ ಸು
ಮುತ್ತಲಿನ ಪ್ರದೇಶ ಆಶ್ರಯಿಸಿ, ಬಿಜಾಪುರದಸುಲ್ತಾನನಾದನು. ಅಮೀರ್ ಬರೀದ
ಆಸೆ ನಿರಾಶೆ ಆಯಿತು. ಈ ಆದಿಲ್ ಷಾ ಷಿಯಾಸಂಗಡಕ್ಕೆ ಸೇರಿದವನು. ಡೆಕ್ಕನ್ನ
ಷಿಯಾ ಮತ ಉದ್ಧಾರ ಮಾಡಲು ಯತ್ನಮಾಡಿದನು. ಇದರಿಂದ ಬಹಮನಿಸುಲ್ತಾ
ರಲ್ಲಿ ಷಿಯು ಮತ್ತು ಸುನ್ನಿ ಪಂಗಡಗಳಲ್ಲಿ ಪರಸ್ಪರ ಕಲಹ ಉಂಟಾಗಿ ಸುಲ್ತಾನರ
ಐಕ್ಯತೆಗೆ ಧಕ್ಕೆ ಒದಗಿತು.

ಕೃಷ್ಣದೇವರಾಯ.ನತಂದೆಯಾದ ನರಸನಯುಜಮಾನನಾದ ಮೊದಲನೆ
ಸಾಲುವನರಸಿಂಹನು ಕೈ ಬಿಟ್ಟು ಹೋದ ರಾಯಚೂರನ್ನು ಗೆಲ್ಲಲು ನಿಷ್ಫಲನಾ
ಆ ಕಾರ್ಯವನ್ನು ಕೃಷ್ಣದೇವರಾಯನ ಪಾಲಿಗೆ ಬಿಟ್ಟು ಕೊಟ್ಟನು. ರಾಯಚೂರನ
ತನ್ನವಶ ಮಾಡಿಕೊಳ್ಳುವುದೇ ತನ್ನ ಮುಖ್ಯ ಗುರಿ ಯೆಂದು ಕೃಷ್ಣ ದೇವರಾಯ
ಧೃಡ ನಿಶ್ಚಯ ಮಾಡಿದನು. ಕೃಷ್ಣದೇವರಾಯನ ಕಾಲದ ಕೃಷ್ಣರಾಜ ವಿಜಯ
ಮತ್ತು ರಾಯವಾಚಕ ಮು ಪ್ರಕಾರ ಕೃಷ್ಣದೇವರಾಯನು ಉಮ್ಮತ್ತೂರಿನ ಗ
ರಾಜನನ್ನು ಸೋಲಿಸಿದ ನಂತರ, ಬಿಜಾಪುರದ ಸುಲ್ತಾನನ ಕಡೆ ತಿರುಗಿದನು. ಇದ
ಮುನ್ನ ರಾಯಚೂರಿನಲ್ಲಿ ಕೃಷ್ಣರಾಯನು ತನ್ನ ಸೇನೆಯ ಠಾಣ್ಯಗಳ
(Garrison) ತನ್ನ ರಕ್ಷಣೆಗಳಗೋಸ್ಕರ ಇಟ್ಟನು. ಇದು ಬಿಜಾಪುರದ ಸುಲ್ತಾ
ನಿಗೆ ಸರಿಬೀಳಲಿಲ್ಲ. ಆಗಿಂದಾಗ್ಗೆ ಬಿಜಾಪುರಕ್ಕೆ ತನ್ನ ಕಡೆಯ ಗೂಢಾಚಾರರ
ಕೃಷ್ಣರಾಯನು ಕಳುಹಿಸಿ, ಶತ್ರುಗಳ ಸನ್ನಾಹಗಳನ್ನು ಆಗಿಂದಾಗ್ಗೆ ಕುತೂಹಲದಿ
ತಿಳಿಯುತ್ತಿದ್ದನು. ಸುಲ್ತಾನನೊಡನೆ ಕದನಕ್ಕೆ ಮುಂಚೆ, ರಾಯಚೂರಿನ ಕೋ
ಭದ್ರಪಡಿಸಿ, ಅಲ್ಲಲ್ಲಿ ತನ್ನ ಸೇನೆಯ ಠಾಣ್ಯಗಳನ್ನು ನಿರ್ಮಿಸಿ, ತನ್ನ ಸೇನೆ ಬಲಪ
ಸಿದ್ಧನಾದನು.

" ದಿಫರ್‌ಗಾಟನ್ ಎಂಪೈರ್ " ಎಂಬ ಗ್ರಂಥಬರೆದ ರಾಬರ್ಟ್ ಸಿಯು
ಪ್ರಕಾರ ಕ್ರಿ. ಶ. 1512 ರಲ್ಲಿ ಕೃಷ್ಣದೇವರಾಯನು, ಬಿಜಾಪುರದ ಸಲ್ತಾನ
ಮುತ್ತುವಮುನ್ನ, ರಾಯಚೂರುಕೋಟೆಯನ್ನು ಮುತ್ತಿದನು. ಆಗ್ಗೆ ಬಿಜಾಪು
ಆದಿಲ್‌ಷಾ ತನ್ನ ರಾಜ್ಯದ ಒಳ ವ್ಯವಹಾರದಲ್ಲಿ, ನಿರತನಾಗಿದ್ದನು. ಅದ್ದರ

ರಾಯಚೂರು ಕಡೆಗೆ ಹೆಚ್ಚು ಗಮನ ಕೊಡಲಾಗಲಿಲ್ಲ. ಇದನ್ನು ಫೆರಿಸ್ಟಾ ಸಹಿತ ಒಪ್ಪಿದ್ದಾನೆ. ನ್ಯೂನಿಜ್ ಪ್ರಕಾರ ಕ್ರಿ. ಶ. 1520 ರಲ್ಲಿ, ಕೃಷ್ಣದೇವರಾಯನು ಬಿಜಾಪುರದ ಸುಲ್ತಾನನ ಮೇಲೆ, ಮೊದಲನೇಬಾರಿ ದಂಡೆತ್ತಿಹೋಗುತ್ತಾನೆ ಈ ಯುದ್ಧದಲ್ಲಿ ಒಂದುಲಕ್ಷಕುದುರೆ ಸೇನೆಯೊಡನೆ ಬಿಜಾಪುರದಸುಲ್ತಾನನು ಕೃಷ್ಣಾನದಿ ದಾಟಿ ರಾಯನೊಡನೆ ಯುದ್ಧಮಾಡಲು ಪ್ರಾರಂಭಿಸಿದನು.

ಈ ಸಂಧರ್ಬದಲ್ಲಿ ಓದುಗರಿಗೆ ನನ್ನಒಂದು ವಿನಂತಿ. ರಾಯಚೂರು ಕದನದ ಬಗ್ಗೆ ಮುಸ್ಲಿಂಇತಿಹಾಸಕಾರರು ಒಂದು ರೀತಿಯ ಹೇಳಿಕೆಕೊಟ್ಟಿದ್ದಾರೆ. ಪಾಶ್ಚಿಮಾತ್ಯ ಪ್ರಯಾಣಿಕರ ಪ್ರಕಾರ ರಾಯಚೂರು ಕದನ ಒಂದು ರೀತಿಯಲ್ಲಿ ಹೇಳಲ್ಪಟ್ಟಿದೆ. ಪ್ರೊಫೆಸರ್ ಎಸ್. ಕೆ. ಅಯ್ಯಂಗಾರ್‌ರವರು, ತಮ್ಮ ಎನ್‌ಷಿ ಯಂಟ ಇಂಡಿಯಾ ಎಂಬ ಗ್ರಂಥದಲ್ಲಿ ತಮ್ಮದೇ ಆದ ಅಭಿಪ್ರಾಯದ ರಾಯಚೂರು ಕದನದ ಅಭಿಪ್ರಾಯ ಕೊಟ್ಟಿದ್ದಾರೆ. ಆದ್ದರಿಂದ ಇವರೆಲ್ಲರಿಂದಲೂ, ತಿಳಿಯ ಬಹುದಾದ ರಾಯಚೂರು ಕದನದ ವಿಚಾರವನ್ನು ಬೇರೆ ಬೇರೆ ರೀತಿಯಲ್ಲಿ ಬರೆದು ಓದುಗರ ತೀರ್ಮಾನಕ್ಕೆ ಬಿಟ್ಟಿದ್ದೇನೆ.

ಫೇರಿಸ್ಟಾ ಪ್ರಕಾರ ಕೃಷ್ಣದೇವರಾಯನು ಕ್ರಿ. ಶ. 1512 ರಲ್ಲಿ ಶಿವನ ಸಮುದ್ರಗೆದ್ದು, ಇದೇವರ್ಷದಕೊನೆಯಲ್ಲಿ ಬಿಜಾಪುರದಗಡಿಗೆಬಂದು ರಾಯಚೂರನ್ನು ತನ್ನ ವಶ ಮಾಡಿಕೊಂಡನು. ನಂತರ ಉದಯಗಿರಿಮೇಲೆ ದಂಡೆತ್ತಿಹೋಗಿ ಗೆದ್ದು ಕ್ರಿ ಶ. 1514 ರಲ್ಲಿ ತನ್ನ ರಾಜಧಾನಿಗೆ ಹಿಂತಿರುಗಿದನು. ಪೇಸ್ (Paes) ಪ್ರಕಾರ ಸುಮಾರು ಹದಿನೇಳು ವರ್ಷಗಳ ಕಾಲ (ಕ್ರಿ. ಶ. 1512 ರಿಂದ 1529 ರ ವರೆಗೆ ) ರಾಯಚೂರು ಕೃಷ್ಣರಾಯನಆಧೀನದಲ್ಲಿತ್ತು. ಕೃಷ್ಣರಾಯನು ಸತ್ತಮೇಲೆ ರಾಯಚೂರಿನಲ್ಲಿ ಅನಾಯಕತ್ವ ಉಂಟಾಯಿತು. ಅವನು ಸತ್ತ ತಕ್ಷಣ ಬಹಮನಿ ಸುಲ್ತಾನರು ರಾಯಚೂರನ್ನು ಮುತ್ತಿ ಮೂರುತಿಂಗಳಕಾಲ ಲೂಟಿ ಹೊಡೆದು ತಮ್ಮ ವಶಮಾಡಿಕೊಂಡರು. ಬಿಜಾಪುರದ ಸುಲ್ತಾನನಿಗೆ, ಗೋವಾದಿಂದ 40, 000 ಪಗೋಡಗಳಿಗೆ ಬರುವ ಕುದುರೆಗಳನ್ನು ಖರೀದಿಮಾಡಿ, ಬಿಜಾಪುರದ ಸುಲ್ತಾನನಿಗೆ ಬಹುಮಾನವಾಗಿ ಕೊಟ್ಟು, ರಾಯಚೂರನ್ನು ಬಿಡಿಸಿಕೊಳ್ಳುವ ಪ್ರಯತ್ನ ವಿಫಲ ವಾಯಿತು.

ರಾಯಚೂರು ದೋಬ್‌ನ್ನ ಪೂರ್ಣವಾಗಿ ವಶಮಾಡಿಕೊಳ್ಳಲು ಸುಲ್ತಾನನು ಭಾರೀಸೇನೆಯೊಡನೆ, ರಾಯಚೂರನ್ನು ಮತ್ತೊಂದುಬಾರಿಬಂದು ಮುತ್ತಿದನು. ಕೃಷ್ಣ ರಾಯನು ಕಲ್ಲಿನಲ್ಲಿ ದೊಡ್ಡ ಬೋನನ್ನು ಮಾಡಿಸಿ, ಅದನ್ನು ಕೋಟೆಯಹತ್ತಿರಇಡಿಸಿ, ಉಪಾಯವಾಗಿ, ಆದಿಲ್ ಷಾ ನನ್ನು ಆ ಬೋನಿನಲ್ಲಿಸಿಕ್ಕಿಸಿ ಸೆರೆಹಿಡಿಸಲು ಉಪಾಯ ಮಾಡಿದ್ದನು. ಆದರೆ, ಅಷ್ಟರಲ್ಲಿ ಬಿಜಾಪುರಸುಲ್ತಾನರಲ್ಲಿ ಒಡಕುಹುಟ್ಟಿತು. ಆದಿಲ್

ಷಾ ಮತ್ತು ನೈಜಾಂ ಷಾ ಇಬ್ಬರೂ ಒಂದಾದರು. ಬಿರಾರಿನ ಇಮ್ಮದ್ ಷಾ, ಬೀದರಿನ ಅಮೀರ್ ಬರೀದ್, ಗೋಲ್ಕುಂಡದ ಕುತಬ್ ಷಾ, ಗುಲ್ಬರ್ಗದ ದಾಸ್ತುರ್ ಉಲ್-ಮುಲ್ಕ ಇವರು,ಇವನಿಗೆ ವಿರೋಧ ಪಂಗಡದವರಾದರು. ಕಾರಣವೇನಂದರೇ, ಷಿಯಾ ಮತ್ತು ಸುನ್ನಿಪಂಗಡಗಳ ವಿಭೇಧ.

ರಾಬರ್ಟ್ಸಿಯಲ್ ಪ್ರಕಾರ, ರಾಯಚೂರು ಕದನ ಕ್ರಿ. ಶ. 1520 ನೇ ಇಸವಿ. ಮೇತಿಂಗಳು, 19 ನೇ ತಾರೀಖು ಶನಿವಾರಅಮಾವಾಸ್ಯೆ ದಿನನಡೆಯಿತು. ಕೃಷ್ಣದೇವರಾಯನು ತನ್ನ ದೊಡ್ಡಸೇನೆಯನ್ನು ರಾಜಧಾನಿಯಿಂದ ರಾಯಚೂರಿಗೆ ಚಲಿಸಿದನು. ಈ ಸೇನೆಯ ನಾಯಕನ ಹೆಸರು ಕಾಮನಾಯಕ, ಈತನ ಸೇನೆಯಲ್ಲಿ 1000ಕುದುರೆ, ಮತ್ತು30,000ಕಾಲಾಳುಗಳುಇದ್ದವು. ಕಾಮನಾಯಕನನಂತರ ತಿಮ್ಮಪ್ಪ ನಾಯಕ ಹೊರಟನು. ಅವನಸೇನೆಯಲ್ಲಿ 60, 000 ಕಾಲಾಳುಗಳು, 35,000ಕುದರೆಗಳು, 30ಆನೆಗಳಿದ್ದವು. ಅವನಂತರ ಆದಪನಾಯಕ, 1000 ಕಾಲಾಳುಗಳು; 5, 000 ಕುದುರೆಗಳು, ಮತ್ತು 50 ಆನೆಗಳೊಡನೆ ಹೊರಟನು. ಅವನನಂತರ ಕೊಂಡಮಾರ 1, 20.000 ಕಾಲಾಳುಗಳು. 6000ಕುದುರೆಗಳು; 60ಆನೆಗಳೊಂದಿಗೆ ಹೊರಟನು.ಅವನಹಿಂದೆಕೊಮಾರನು,80,000ಕಾಲಾಳುಗಳು 2500, ಕುದರೆಗಳು. 40 ಆನೆಗಳೊಂದಿಗೆ ಹೊರಟನು. ಅವನನಂತರ ವಿಜಯನಗರದ ಗವರ್ನರ್ಆಗಿದ್ದ ಓಗೆಂಸ್‌ದರ್‌ಹೊ, 1000 ಕುದುರೆಗಳು, 30, 000 ಕಾಲಾಳುಗಳು, 10 ಆನೆಗಳೊಂದಿಗೆ ಹೊರಟನು. ಅವನಹಿಂದೆ; ಕೃಷ್ಣದೇವರಾಯನ ಪ್ರೀತಿಪಾತ್ರರಾದ ಮೂವರು ಭಂಟರು, 40, 000 ಕಾಲಾಳುಗಳು; 1000 ಕುದುರೆಗಳು, 15 ಆನೆಗಳೊಂದಿಗೆ, ಹೊರಟರು. ಈ ಮೇಲ್ಕಂಡ ತಿಮ್ಮಪ್ಪನಾಯಕನೇ ಸಾಲುವ ತಿಮ್ಮನು. ಕೊಂಡಮಾರನೇ ಕೊಂಡಮಾರಸು. ಇವನು, ಉದಯಗಿರಿಯ ಮಹಾರಾಜ್ಯದ ವೈಸ್ರಾಯಿ ಆಗಿದ್ದನು. ಕೊಮ್ಮನೇ ರಾಜಕುಮಾರರಲ್ಲಿ ಒಬ್ಬನಾದ ಕುಮಾರ. ಓಗೇಂದ್ರರಾವ್‌ನೇ ಗೋವಿಂದರಾಜ, ಅಥವಾ ಸಾಲುವಗೋವಿಂದ. ಇವನು ಸಾಲುವತಿಮ್ಮನ ತಮ್ಮ.

ಹಾಗೆ 1, 5000 ಕಾಲಾಳುಗಳು, 200 ಕುದುರೆಗಳೊಂದಿಗೆ, ಹೊರಟನು. ಕುಮಾರವೀರಯ್ಯ 8000 ಕಾಲಾಳು, 400 ಕುದರೆಗಳು,ಮತ್ತು 20 ಆನೆಗಳೊಂದಿಗೆ, ಹೊರಟನು. ಬಂಕಾಪುರ್ ನಾಯಕನಜನ ಡೋಮರ್ ಜನರೊಂದಿಗೆಸೇರಿ, ರಾಯಚೂರಿಗೆ ಬೇರೆ ಬೇರೆ ಮಾರ್ಗವಾಗಿ ಹೊರಟರು. ಅವರನಂತರ 12000 ಕಾಲಾಳುಗಳೊಂದಿಗೆ, ವಿಜಯನಗರದ ಕೆಲವು ಕ್ಯಾಪ್ಟನ್‌ಗಳು, ಹೊರಟರು. ಕೃಷ್ಣದೇವರಾಯನು 6 000 ಕುದರೆಗಳು, 49, 000 ಕಾಲಾಳುಗಳೊಂದಿಗೆ ಹೊರಟನು. ಮತ್ತೆ ಕೆಲವರುಇವನಹಿಂದೆ ಕತ್ತಿ,ಭರಾಣಿ,ಈಟಿಗಳೊಂದಿಗೆ

300 ಆನೆಗಳುಸೇರಿ, ಇವರಕ್ಷಣೆಗೋಸ್ಕರ ಹೊರಟರು. ಒಟ್ಟಿನಲ್ಲಿರಾಬರ್ಟ್ಸಿ ಯಲ್ ಪ್ರಕಾರ, ಕೃಷ್ಣರಾಯನಕಡೆ, 703,000 ಕಾಲಾಳುಗಳು 32,600 ಕುದುರೆಗಳೂ 551 ಆನೆಗಳೂ,ಇದ್ದವು. ತನ್ನಶತ್ರುಗಳಿಗೆ, ವಿಜಯನಗರದಮಿಲಿಟ್ರಿ ವೈಭವ ಮತ್ತು ಪರಾಕ್ರಮಎಷ್ಟರಮಟ್ಟಿಗೆ ಇದೆ ಎಂಬುದನ್ನುತೋರಿಸಲು ಕೃಷ್ಣದೇವ ರಾಯನು ಭಾರೀಸೇನೆ ಏರ್ಪಡಿಸಿ ರಾಯಚೂರು ದಿಗ್ವಿಜಯಕ್ಕೆ ಹೊರಟದು.

ಮಲ್ಲಿಯಾಬಾದ್ (ರಾಯಚೂರಿಗೆ ಐದುಮೈಲಿ ದೂರದಲ್ಲಿದೆ )ಹತ್ತಿರಎಲ್ಲಾ ಸೈನ್ಯವು ಒಂದಾಯಿತು. ರಾಯಚೂರು ಕೋಟೆಯಸುತ್ತಲೂ ಗುಂಡಿತುಂಬ ನೀರು ಇತ್ತು. ಈ ಗುಂಡಿಯವರೆವಿಗೆ ವಿಜಯನಗರದ ಸೇನೆ, ಚಾಮನಾಕನ ನಾಯಕತ್ವ ದೊಂದಿಗೆ ಬಂತು. ಮಿಕ್ಕನಾಯಕರು ತಮ್ಮ ತಮ್ಮ ನಿಗದಿಯಾಗಿದ್ದ ಜಾಗದಲ್ಲಿ ನಿಂತರು. ರಾಯಚೂರು ಕೋಟೆಮುತ್ತಿಗೆ, ಅತಿ ಭಯಂಕರವಾಗಿ ಶುರುವಾಯಿತು. ಹಂಪೆಯಿಂದ ರಾಯಚೂರುವರಿವಿಗೆ ವಿಜಯನಗರದ ಸೇನೆಸಂತೆನೋಡಿ, ಶತ್ರುಗಳು ದಿಗ್‌ಭ್ರಾಂತರಾದರು. ಆಗ್ಗೆ ರಾಯಚೂರು ಕೋಟೆಮೇಲೆ ವಿಜಾಪುರದಸುಲ್ತಾನನ ಕಡೆಯ 8000 ಕಾಲಾಳುಗಳು, 400 ಕುದುರೆಗಳೂ, 20 ಆನೆಗಳೂ ಇದ್ದವು. ಕೃಷ್ಣದೇವರಾಯನ ಸೈನ್ಯದಘರ್ಜನೆನೋಡಿ, ಕೋಟೆಯಮೇಲಿದ್ದ ಆನೆಗಳುಹೆದರಿ ದುರ್ಗದಮೇಲಿದ್ದ ಬಂಡೆಗಳನ್ನು ಕೆಳನೆಲಕ್ಕೆಉರುಳಿಸಿದವು. ಈ ಬಂಡೆಗಳು ಕೆಳಗೆ ಉರುಳಿದಕಾರಣ ಬಹುಮನಿಸುಲ್ತಾನರ ಸೈನ್ಯದ ಐದುವರ್ಷದ ಅಹಾರವೆಲ್ಲ ನಾಶ ವಾಯಿತು. ಸುಮಾರು 200 ಭಾರವಾದ ಸಿಡಿಮದ್ದುಗಳ ಬಂಡಿಗಳು ಹಾಳಾದವು.

ಕೃಷ್ಣರಾಯನ ಸೇನೆ ಊರಿನೊಳಗೆ ಅಕ್ರಮಣ ಮಾಡುತ್ತಿರುವುದನ್ನು ನೋಡಿ ರಾಯಚೂರಿನ ಜನರು ರಾಯಚೂರಿನ ಗೇಟ್ ಬಾಗಿಲನ್ನು ಕಲ್ಲು ಮತ್ತು ಗಾರೆಯಿಂದ ಮುಚ್ಚಿದರು. ರಾಯಚೂರಿನ ಉತ್ತರ ಮತ್ತು ದಕ್ಷಿಣ ಭಾಗ ಸ್ವಾಭಾ ವಿಕ ಬಂಡೆಗಳಿಂದ ರಕ್ಷಣೆ ಕೊಟ್ಟಿತು. ಆದ್ದರಿಂದ ಪೂರ್ವದಿಂದ ಸೈನ್ಯದ ಮುತ್ತಿಗೆ ಬಲವಾಯಿತು. ಇಷ್ಟರಲ್ಲಿ ಆದಿಲ್ ಷಾನು, ಕೃಷ್ಣಾ ನದಿಯ ಆಚೆ ದಡದಲ್ಲಿ ಕ್ಯಾಂಪ್ ಮಾಡಿದ್ದಾನೆಂದು ಕೃಷ್ಣ ರಾಯನಿಗೆ ಗೊತ್ತಾಯಿತು. ಆದಿಲ್ ಷಾ ಸೈನ್ಯ, 120,000 ಕಾಲಾಳುಗಳು 18,99 ಕುದರೆಗಳು 56 ಆನೆಗಳಿಂದ ಕೂಡಿತ್ತು. ಇದರ ಜೊತೆಗೆ ಉತ್ತಮವಾದ ಸಿಡಿಮದ್ದುಗಳ ಬಂಡಿ ಸಹ ಇದ್ದವು. ಕೃಷ್ಣಾನದಿ ದಾಟುತ್ತಾ ಇರುವಾಗ ಕೃಷ್ಣರಾಯನು ಅವನ ಸೈನ್ಯ ಪ್ರತಿಭಟಿಸಲು ಹನ್ನೊಂದು ಭಾಗಗಳನ್ನಾಗಿ ಮಾಡಿ ಸಾಲಾಗಿ ನಿಲ್ಲಿಸಿದನು. ಶ್ರೀರಂಗಪಟ್ಟಣದ ಕುಮಾರ ವೀರಯ್ಯನು, ಕೃಷ್ಣರಾಯನ ಅಪ್ಪಣೆ ಪ್ರಕಾರ ಮುಂದಿನ ಪದಾತಿ ನಾಯಕನಾಗಿ ಶತ್ರುಗಳ ಮೇಲೆ ಬೀಳಬೇಕಾಯಿತು. ಆದರೆ ಆದಿಲ್ ಷಾ ಜಗ್ಗಲಿಲ್ಲ. ಇವರಲ್ಲೇ ಒಡಕು ಹುಟ್ಟಿತು. ಸೈನ್ಯ ಹಿಮ್ಮೆಟ್ಟಬೇಕಾಯಿತು. ಆದಿಲ್‌ಷಾ ಸೇನೆಯ ಗುಂಪು

ಜಾಗ್ರತೆಯಾಗಿ ಕೃಷ್ಣರಾಯನ ಸ್ವಂತ ಪದಾತಿ ಮೇಲೆ ಬೀಳಲು ಹವಣಿಸಿತು
ಇದನ್ನು ನೋಡಿ ತಾನೇ ನಾಯಕನಾಗಿ ನಿಂತು, ಕೃಷ್ಣ ದೇವರಾಯನು, ಎಲ್ಲ
ಪದಾತಿ ಒಡನೆ, ಅವನ ಮೇಲೆ ಬೀಳಲು, ಸಿದ್ಧನಾದನು. ಅತಿ ಜಾಗ್ರತೆಯಾ
ಇಷ್ಟೊಂದು ದೊಡ್ಡ ಸೈನ್ಯ ಅವನಮೇಲೆ ಬೀಳಲು ಆದಿಲ್‌ಷಾ ಗಾಬರಿಯಾಗಿ ತನ
ಸಿಡಿ ಮದ್ದು ಗುಂಡುಗಳಿಂದ ಕೃಷ್ಣದೇವರಾಯನನ್ನು ಹಿಮ್ಮೆಟ್ಟಿಸಿದನು .ಆದಿಲ್‌ಷ
ಸೈನ್ಯವನ್ನು ಬೆನ್ನಟ್ಟಿಸಿದನು. ಕೃಷ್ಣದೇವರಾಯನೂ ಸಹ ಕೃಷ್ಣಾನದಿ ಹತ್ತಿರ ಇ
ಆದಿಲ್‌ಷಾ ಕ್ಯಾಂಪಿಗೆ ಮುತ್ತಿಗೆ ಇಟ್ಟನು. ಅಲ್ಲಿಗೆ ಕೃಷ್ಣರಾಯನ ಸೇನೆ ತನ
ಮುನ್ನೋಟ ನಿಲ್ಲಿಸಿತು.

ಆದಿಲಾಷಾ ಸೇನೆ ರಾಯಚೂರು ಕೋಟೆ ಹತ್ತಿರ ಬರುವ ವರ್ತಮಾ
ಕೇಳಿ ಕೃಷ್ಣರಾಯನ 200 ಕುದರೆ ಮತ್ತು ಕೆಲವು ಕಾಲಾಳುಗಳು ಕೋಟೆಯನ
ರಕ್ಷಣೆ ಗೋಸ್ಕರ ಪ್ರವೇಶಿಸಿದವು. ಆದಿಲ್‌ಷಾ ಕಡೆಯ ಐದು ಜನ ಸೇನಾನಾಯ
ರನ್ನು ಕೃಷ್ಣದೇವರಾಯನು ಭಂಧಿಸಿದನು. ಇವರಲ್ಲಿ ಸಲಾಬ ತ್‌ಖಾನ್ ಸಹ ಇದ್ದನ
ಶತ್ರುಗಳ ಕಡೆ 4000 ಕುದುರೆಗಳು, 100 ಆನೆಗಳು, 900 ಗುಂಡಿನಗಾಡಿಗಳ
ಅನೇಕ ಗುಡಾರಗಳು ನಾಶವಾದವು. ಕೃಷ್ಣರಾಯನು 16,000 ಕಾಲಾಳುಗಳನ
ಕಳೆದುಕೊಂಡನು. ನಂತರ ಕೃಷ್ಣರಾಯನು, ತನ್ನ ರಾಯಚೂರಿನಕ್ಯಾಂಪಿಗೆ ವಾಪ
ಬಂದನು. ಕೋಟೆಯನ್ನುಬಲವಾಗಿಮುತ್ತಿದನು. ಪೋರ್ಚಗೀಸ್ ಕ್ರಿಸ್ಟಾ ಓಡೆಫಿಗಯ
ಯರ್‌ಡೋ ( Christas De Figueyredu ) ( And 20 Musq
etters) ಸಹಾಯದಿಂದ, ಕೃಷ್ಣದೇವರಾಯನು, ಕೋಟೆಯಗೋಡೆಗಳನ್ನುಒಡೆದನ
ವಿಜಯನಗರ ಏಳುಸುತ್ತಿನ ಕೋಟೆಯಮಧ್ಯದಲ್ಲಿದ್ದರೆ, ರಾಯಚೂರುಮೂರುಸುತ್ತಿ
ಕೋಟೆಯಮಧ್ಯದಲ್ಲಿತ್ತು.

ಸುಮಾರು ಇಪ್ಪತ್ತು ದಿವಸ ರಾಯಚೂರು ಕದನ ನಡೆಯಿತು. ಇಪ್ಪತ್ತ
ಯ ದಿವಸ ರಾಯಚೂರು ಕೃಷ್ಣರಾಯನ ವಶವಾಯಿತು. ಈ ವಿಜಯಕ್ಕೆ ಈ ಕೆ
ಕಂಡವರು, ತಮ್ಮ ಸಂತೋಷ ವ್ಯಕ್ತಪಡಿಸಲು ರಾಯಚೂರಿಗೆ ಬಂದರು. ಇವರೆಲ್ಲರ
ಬಹಮನಿ ಸುಲ್ತಾನರ ಕಡೆಯವರು. ಮತ್ತು ಅವರ ರಾಯಭಾರಿಗಳು

(1). ನೈಜಾಂಷಾ ಪ್ರತಿನಿಧಿ. (2). ಇಮಾದ್‌ಉಲ್‌ಮುಲ್ಕಪ್ರತಿನ
(3). ದಸ್ತುರ್‌ಉಲ್‌ಮುಲ್ಕ ಪ್ರತಿನಿಧಿ. (4). ಅಮೀರ್‌ಬರೀದ್ ಪ್ರತಿನಿ
(5) ಡೆಕ್ಕನ್ನಿನ ರಾಜ್ಯಗಳ ಅನೇಕ ಶ್ರೀಮಂತರು. ಈ ಮೇಲ್ಕಂಡವರು, ತವ
ತಪ್ಪನ್ನು ಒಪ್ಪಿಕೊಂಡು ಆದಿಲ್‌ಷಾ ಕಡೆಯಿಂದ ಗೆದ್ದ ಪ್ರದೇಶಗಳನ್ನು ದಯವಿಟ
ನಮಗೆ ಪುನಃ ಕೊಡಬೇಕೆಂದು ಕೇಳಿಕೊಂಡರು. ಇದಕ್ಕೆ ಕೃಷ್ಣರಾಯನು ಪ್ರತಿಭಟ
ತನ್ನ ರಾಜಧಾನಿಗೆ ಹಿಂತಿರುಗಿದನು. ಹೊಸಪೇಟೆಯಲ್ಲಿ ಕೃಷ್ಣರಾಯನು ತಂಗಿದ್ದಾ

ಆದಿಲ್‌ಷಾ ಕಡೆಯ ರಾಯಭಾರಿ ಬಂದು ಆದಿಲ್‌ಷಾ ಕಡೆಯಿಂದ ಕಿತ್ತುಕೊಂಡಿದ್ದ ಪ್ರದೇಶಗಳನ್ನೆಲ್ಲಾ ಹಿಂತಿರುಗಿ ಕೊಡಬೇಕೆಂದುಬೇಡಿದನು. ಅದಕ್ಕೆ ಉತ್ತರವೀಯುತ್ತಾ ಕೃಷ್ಣರಾಯನು ನಿಮ್ಮ ಆದಿಲ್‌ಷಾ ನನ್ನಹತ್ತಿರಬಂದು ನನ್ನಕಾಲು ನೆಕ್ಕಲಿ ಎನ್ನಲು ರಾಯಭಾರಿ ಅವಮಾನಿತನಾಗಿ ಹಿಂತಿರುಗಿದನು.

ನಂತರ ಕೃಷ್ಣದೇವರಾಯನು ಬಿಜಾಪುರಕ್ಕೆಹೋಗಿ ಕೆಲವುದಿವಸ ಇದ್ದನು ನೀರಿಗೆ ಕ್ಷಾಮ ಅಲ್ಲಿ ಬಂದಾಗ, ಆ ಜಾಗ ಬಿಟ್ಟನು. ಮೂಡಗಲ್ ಮುಖಾಂತರ ತನ್ನ ಜಾಗಕ್ಕೆ ಹೊರಟನು. ಆದಿಲ್ ಷಾ ತನ್ನ ರಾಜಧಾನಿಯಿಂದ ಬಿಜಾಪುರಕ್ಕೆ ಹೋಗಿ, ಬಿಜಾಪುರದ ಸ್ಥಿತಿ ನೋಡಿ ಕಣ್ಣೀರಿಟ್ಟು ಯಾತಕ್ಕೆ ನಾನು ಶರಣಾಗಲಿಲ್ಲ ಎಂದು ಪಶ್ಚಾತ್ತಾಪ ಪಟ್ಟನಂತೆ ಬೆಳಗಾಂನ ಅಸ್ಸದ್‌ಖಾನ್ ಎಂಬುವನು, ಮೂಡಗಲ್ಲಿನಲ್ಲಿದ್ದ ಕೃಷ್ಣದೇವರಾಯನ ಹತ್ತಿರಹೋಗಿ ಆದಿಲ್‌ಷಾ ಏನೂತಪ್ಪುಮಾಡಲಿಲ್ಲ ಎಲ್ಲವೂಅವನ ದಳಪತಿಯಾಗಿದ್ದ ಸಲಾಬತ್‌ಖಾನ್‌ನ ತಪ್ಪು ಆದ್ದರಿಂದ ರಾಯಚೂರು ಕೋಟೆ ದಯ ವಿಟ್ಟು ನಮಗೆ ಹಿಂತಿರುಗಿ ಕೊಡಬೇಕೆಂದು ಕೇಳಿಕೊಂಡನು ಇದಕ್ಕೆ ಕೋಪಗೊಂಡ ಕೃಷ್ಣರಾಯನು ಅನನನ್ನು ಕೊಲ್ಲಲು ಅಪ್ಪಣೆ ಮಾಡಿದನು. ಅವನು ಹೆದರಿ ಬೆಳಗಾಂಗೆ ಓಡಿಹೋದನು. ನಂತರ ಕೃಷ್ಣರಾಯನು ಗುಲ್ಬರ್ಗ ಮುತ್ತಲು ಅನುವಾದನು.

ಮುಸ್ಲಿಂ ಇತಿಹಾಸಕಾರ ಫೆರಿಸ್ತಾ,

ರಾಯಚೂರು ಕದನದ ಬಗ್ಗೆ ಈ ಕೆಳಗೆ ಕಂಡಂತೆ ಹೇಳಿದ್ದಾನೆ.

ಕೃಷ್ಣರಾಯನು, ಮೂಡಗಲ್ ಮತ್ತು ರಾಯಚೂರನ್ನು ಪುನಃ ತನ್ನ ವಶ ಮಾಡಿಕೊಳ್ಳಲು ಆದಿಲ್‌ಷಾ ಕೃಷ್ಣಾನದಿ ದಡದ ಹತ್ತಿರ ತನ್ನ ಸೈನ್ಯ ಠಿಕಾಣಿ ಮಾಡಿದನು. ಅಲ್ಲಿ ಅವನ ಸ್ನೇಹಿತರ ಸೇನೆ ಸಹಿತ ಇವನೊಂದಿಗೆ ಸೇರಿತು. ಒಟ್ಟನಲ್ಲಿ 50, 000 ಕಾಲಾಳುಗಳು, ಮೊಟ್ಟಮೊದಲು ಆದಿಲ್‌ಷಾ 7000 ಕುದುರೆ ಗಳೊಡನೆ, ನದಿಯುದಡದಲ್ಲಿ ಕದನಕ್ಕೆ ಶುರುಮಾಡಿದವು. ಆದಿಲ್ ಷಾ ಸೇನೆ ಸಂಗೀತ ಮಧ್ಯದಲ್ಲಿ ನಿರತವಾಗಿತ್ತು, ಲಿಕ್ಕರ್ ಕುಡಿದ ಆದಿಲ್‌ಷಾ ಮತ್ತು ಅವನ ಸೇನೆ ಪ್ರಜ್ಞೆ ತಪ್ಪಿತ್ತು. ಇದನ್ನು ನೋಡಿ ಕೃಷ್ಣರಾಯನು ಅವರಮೇಲೆ ಬಿದ್ದನು. 100 ಶತ್ರುಗಳ ದೋಣಿ ನಾಶವಾಯಿತು. ಕೃಷ್ಣರಾಯನು ಆನೆಗಳೊಡನೆ ಪ್ರವಾಹದಿಂದಿ ಕೂಡಿದ ಕೃಷ್ಣನದಿಗೆ ಬಿದ್ದನು. ಅವನ ಹಿಂದೆ ಸಿಪಾಯಿಗಳು 250 ಆನೆಗಳಮೇಲೆ ಬಂದರು. ಎಲ್ಲರೂ ಸುಖವಾಗಿ ನದಿಯ ಆಚೆದಡ ಸೇರಿದರು. ಯುದ್ಧಕ್ಕೆ ಶುಕುವಾಯಿತು. ಇಕ್ಕೆಡೆಗಳಲ್ಲೂ ಜೋರಾದ ಹೋರಾಟ ನಡೆಯಿತು. 1000 ಹಿಂದೂಗಳು ಮೊಟ್ಟ ಮೊದಲು ಸತ್ತರು. ಅದರಲ್ಲಿ ವಿಜಯನಗರದ ಮುಖ್ಯ ದಳಪತಿಯಾಗಿದ್ದ ಸಂಗತ್ ರಾಯನು ಸತ್ತನು. ಮುಸ್ಲಿಮರ ಸೇನೆ, ಕೃಷ್ಣರಾಯನ ಮದ್ದುಗುಂಡಿನ ಹೊಡೆತಕ್ಕೆ ಸಿಕ್ಕಿನಾಶವಾಯಿತು. ಮಿಕ್ಕ ಮುಸ್ಲಿಮರು ಇದನ್ನು ತಪ್ಪಿಸಿಕೊಳ್ಳಲು ನದಿಗೆ ಬಿದ್ದರು.

ಆಧಿಲ್‌ಷಾ ಕಡೆಯ ಮುಖ್ಯ ನಾಯಕರಾಗಿದ್ದ ಟುರ್‌ಸೂನ್ ಬಹದ್ದೂರ್ ಮತ್ತು ಇಬ್ರಾಹಿಂ ಜೇಗ್ ರವರು ನದಿಯಮೇಲೆ ಆನೆ ಸವಾರಿ ಮಾಡಿಕೊಂಡು ನದಿಯ ಮೇಲೆ ಹೋಗುತ್ತಿದ್ದಾಗ ಜಾರಿ ಬಿದ್ದು ಸತ್ತು ಹೋದರು.

ಶತ್ರುಗಳನು ಪುನಃ ಸೋಲಿಸಿ ತನ್ನಮಾನ ಕಾಪಾಡಿಕೊಳ್ಳುವವರೆಗೂ ತಾನು ಮಧ್ಯಕುಡಿಯುವುದಿಲ್ಲವೆಂದು ಶಪಥಮಾಡಿ, ಆಡಿಲ್‌ಷಾ ಪುನಃ ಹೋರಾಡುವುದಕ್ಕೆಶುರುಮಾಡದನು. ಆದಿಲ್‌ಷ್ ರಾಯಚೂರಿಗೆ ಬಂದು ತನ್ನದೊಡ್ಡಸೇನೆ ಅವನ ಮೇಲೆ ಬೀಳಿಸಿದನು. ಯುದ್ಧಕ್ಕೆ ಶುರುವಾಯಿತು. ಆಡಿಲ್‌ಷಾ ಪುನಃ ಸೋತನು. ಕೃಷ್ಣನು ರಾಯ ಚೂರನ್ನು ಮುತ್ತಿದನು. ನಂತರ ಬಿಜಾಪುರಕ್ಕೆಹೋಗಿ ಶತೃಗಳನ್ನು ನಿರ್ಮೂಲಮಾಡಿ ವಾಪಸ್ಸುಬಂದನು. ಈ ವೇಲ್ಕಂಡ ವಿಚಾರಗಳನ್ನು ಪೋರ್ಚುಗೀಸ್ ಆಧಾರಗಳು ಇದನ್ನು ಸಮರ್ಥಿಸುತ್ತವೆ.

ರಾಯಚೂರು ಕದನವಾದಮೇಲೆ ಕೃಷ್ಣರಾಯನು. ಪೂರ್ತಿಯಾಗಿ ತನ್ನ ಯುದ್ಧಕಾರ್ಯಗಳನ್ನು ನಿಲ್ಲಿಸಿ; ಶಾಂತಿಯುತವಾದ ಆಳ್ವಿಕೆಗೆ ಅನುವಾದನು. ಸಾಲುವ ನರಸಿಂಹನ ಕನಸು ಇಂದು ನನಸಾಯಿತು. ಬಹಾಳಕಾಲದ ಶತೃಗಳು ಇನ್ನುಮುಂದೆ ಕೃಷ್ಣನನ್ನು ಮರ್ಯಾದೆಮಾಡುವ ಕಾಲಬಂತು. ಕೃಷ್ಣದೇವರಾಯನ ಕಾಲದಲ್ಲಿ ರಾಯಚೂರು ತೆಲುಗುಸಾಹಿತ್ಯಕ್ಕೆಪ್ರಸಿದ್ಧಿಯಾಗಿತ್ತು.ರಾಯಚೂರನ್ನು ಕೃಷ್ಣರಾಯನ ವೈಸ್ರಾಯಿ ಆಳಲು ಶುರುಮಾಡಿದನು.

ಆದರೆ ಮೈಸೂರು ವಿಶ್ವ ವಿದ್ಯಾನಿಲಯದ ಇತಿಹಾಸಪ್ರಾಧ್ಯಾಪಕರಾದ ಡಾ॥ ಎಸ್. ಶ್ರೀ ಕಂಠಶಾಸ್ತ್ರಿಗಳು, " ಚರಿತ್ರೆಯಮಹಾಪುರಷರು " ಎಂಬ ಗ್ರಂಥದಲ್ಲಿ ಕೃಷ್ಣದೇವರಾಯನಮೇಲೆ ಲೇಖನಬರೆಯುತ್ತಾ ಈ ಕೆಳಗೆಕಂಡಂತೆ ಹೇಳಿದ್ದಾರೆ.

ಉತ್ತರದಲ್ಲಿ ಅಹಮ್ಮದ್ ನಗರ; ಬಿರಾರ್, ಬಿಜಾಪೂರ್, ಗೋಲ್ಕೊಂಡ. ಮತ್ತು ಬಿದರುಗಳ ಸುಲ್ತಾನರು, ತಮಲ್ಲೇ ಹೊಡೆದಾಡುತ್ತಿದ್ದರು. ಬಿಜಾಪುರದ ಯೂಸೂಫ್‌ಆದಿಲ್‌ಷಾ ಸತ್ತಮೇಲೆ,ಇಸ್ಮಾಯಿಲ್‌ಆದಿಲ್‌ಷಾ ಹುಡುಗನಾಗಿದ್ದರೂ ಕಮಲಖಾನ್ ಎಂಬುವನ ಕುತಂತ್ರದಿಂದ ಸುಲ್ತಾನನಾದನು. ಬೀದರೆಯ ಸುಲ್ತಾನನಾದ ಅಮೀರ್ ಅಲಿಬರೀದನು, ಬಿಜಾಪುರದಮೇಲೆ ಸೇಡನ್ನು ತೀರಿಸಿಕೊಳ್ಳಲು, ಕೃಷ್ಣರಾಯನನ್ನು ಸಹಾಯಕ್ಕೆಕರೆದನು. ಕೃಷ್ಣರಾಯನು ಇದಕ್ಕೆಒಪ್ಪಿ ರಾಯಚೂರು ಅಂತರ್ವೇದಿಯನ್ನು ಆಕ್ರಮಿಸಿದನು. ಕ್ರಿ. ಶ 1521ರಲ್ಲಿ ಈ ರಾಯಚೂರನ್ನು ವಿಜಯನಗರದವರಿಂದ ಕಿತ್ತುಕೊಳ್ಳಲು ಇಸ್ಮಾಯಿಲ್ಲನು ಯತ್ನಿಸಿ, ಕೃಷ್ಣಾನದಿಯ ಉತ್ತರದಡವನ್ನುಸೇರಿ, ಠಿಕಾಣಿ ಹಾಕಿದನು. ಆದರೆ ಕೃಷ್ಣದೇವರಾಯನು, ಕೆಂಬಾವಿ ಬಳಿಯಲ್ಲಿ ಗುಲ್ಬರ್ಗದಸೇನೆಯನ್ನು, ನೈರಮಣ ಎಂಬ ಸ್ಥಳದಲ್ಲಿ ವಿಜಾಪುರದವರನ್ನು ಸೋಲಿಸಿ, ರಾಯಚೂರು ದುರ್ಗಕ್ಕೆ ಮುತ್ತಿಗೆ ಹಾಕಿದನು. ಕೃಷ್ಣರಾಯನು, ಯುದ್ಧ

ದಲ್ಲಿ ಮುಖಂಡನಾಗಿ, ಕೋಟೆಗೆ ಲಗ್ಗೆಹತ್ತಿಸಿದ್ದರಿಂದ ವಿಜಯನಗರದವರಿಗೆ,ವಿಜಯ ವಾಯಿತು. ರಾಯಚೂರು ದುರ್ಗವು ವಶವಾಯಿತು ಷಾಹಿರಾಜನ ಹಾವಳಿಯು ನಿಂತಿತು. ಕೃಷ್ಣರಾಯನು ಜೀವಂತನಾಗಿರುವವರೆಗೂ; ಮಹಮ್ಮದೀಯರು ವಿಜಯ ನಗರದವರಿಗೆ ಹೆದರಿಕೊಂಡು ರಾಯಚೂರು ಪ್ರಾಂತವನ್ನು ಸಾಧಿಸಲು ಯತ್ನಮಾಡ ಲಿಲ್ಲ ರಾಯಚೂರಿನಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ವೈಷ್ಣವಮತಏಳಿಗೆ ಪಡೆಯಿತು ಮಧ್ವಗುರುಗಳಾದ ವ್ಯಾಸರಾಜರು, ಅನೇಕಸಲ ರಾಯಚೂರಿಗೆ ಬಂದು ಮಾಧ್ವಮತ ಪ್ರಚಾರಮಾಡಿದರು. ಕೃಷ್ಣದೇವರಾಯನು, ತನ್ನರಾಜ್ಯವನ್ನು ಅನೇಕನಾಡುಗಳನ್ನಾಗಿ ವಿಂಗಡಿಸಿದ್ದನು. ಅದರಲ್ಲಿ ಈ ರಾಯಚೂರು ರಾಯನಾಡಾಗಿ ವಿಭಾಗ ವಾಗಿತ್ತು. ಈ ರಾಯನಾಡಿಗೆ ದಂಡನಾಯಕನೇ ಅಧಿಕಾರಿ.

ದಿವಂಗತ ಪ್ರೊಫೆಸರ್‌ರು ಎಸ್.ಕೆ. ಆಯಂಗಾರ್‌ರವರಿಂದ ವಿವರಿಸಲ್ಪಟ್ಟ ಕೃಷ್ಣರಾಯನ ಕ್ರಿ. ಶ. 1520ರ ಶಾಸನ ರಾಯಚೂರು ಕದನದಬಗ್ಗೆ ಈ ರೀತಿ ಹೇಳುತ್ತೆ.

"ಕ್ರಿ.ಶ. 1520 ವರ್ಷದಪ್ರಾರಂಭದಲ್ಲಿ ಕೃಷ್ಣದೇವರಾಯ ಬಿಜಾಪುರದ ಇಸ್ಮಾಯಿಲ್ ಆದಿಲ್‌ಷಾರವರ ಮೇಲೆ ಬೀಳಲು, ಸೈನ್ಯಸಿದ್ಧತೆ ಮಾಡುತ್ತಿದ್ದನು. ಇದಕೋಸ್ಕರ ದಕ್ಷಿಣಭಾರತದ ಮುಸ್ಲಿಂಸುಲ್ತಾನರ ಸಹಾಯಪಡೆಯಲು ಆಲೋಚಿ ಸಿದನು. ಇದಕ್ಕೆ ಬೀದರ್, ಅಹಮದ್‌ನಗರ. ಮತ್ತು ಗೋಲ್ಕುಂಡಗಳ ಸುನ್ನಿಪಂಗಡ ಸುಲ್ತಾನರು, ಕೃಷ್ಣರಾಯನ ಕಡೆಸೇರಲು ಆಶಿಸಿದರು. ಷಿಯಾಪಂಗಡದ ಬುರ್ ಹಾನ್ ನೈಜಾಂ ಉಲ್ ಮುಲ್ಕ ಮತ್ತು ಆದಿಲ್‌ಷಾರವರು ಇದಕ್ಕೆ ಕೋಪಗೊಂಡು ಕೃಷ್ಣರಾಯನಮೇಲೆ ಕದನಕ್ಕೆ ಶುರುಮಾಡಿದರು. ಕ್ರಿ. ಶ. 1520 ರಲ್ಲಿ ಬಿಜಾ ಪುರದ ಸುಲ್ತಾನನ ಅಧೀನದಲ್ಲಿದ್ದ ರಾಯಚೂರನ್ನು ಗೆಲ್ಲಲು ರಾಯಚೂರುಕಡೆ ಸೇನೆ ಯೊಡನೆಪ್ರಯಾಣಮಾಡಿದನು. ರಾಯಚೂರುಕದನ, ಕ್ರಿ. ಶ. 1520 ನೇ ಇಸವಿ ಮೇ ತಿಂಗಳು 19ರಲ್ಲಿ ನಡೆಯಿತು. ಕೃಷ್ಣರಾಯನು, ಕೋಟೆಒಡೆದು ಅಲ್ಲಲ್ಲಿ ಹಳ್ಳ, ಕಂದಕಗಳನ್ನುಮಾಡಿ ನೀರನ್ನುತುಂಬಿದನು. ರಾಯಚೂರಿನ ಮುಸ್ಲಿಂ ಗವರ್ನರ್‌ನ್ನು ಕೊಲ್ಲಲಾಯಿತು. ಇಪ್ಪತ್ತುದಿವಸದಕದನವಾದ ಮೇಲೆ, ಕಡೇದಿವಸ ರಾಯಚೂರು ಕೋಟೆ, ಕೃಷ್ಣರಾಯನಕಡೆ ಶರಣಾಗತವಾಯಿತು.

ಮತ್ತೊಂದು ತೆಲುಗು ಗದ್ಯಗ್ರಂಥವಾದ" ರಾಯವಾಚಕಮು " ಕೃಷ್ಣ ರಾಯನ ರಾಯಚೂರು ಕದನದಬಗ್ಗೆ ಈ ಕೆಳಗೆಕಂಡರೀತಿ ಹೇಳುತ್ತೆ.

" ಕೃಷ್ಣರಾಯನು; ಬಿಜಾಪುರದಸುಲ್ತಾನನಮೇಲೆ ಕದನಕ್ಕೆಮುಂಚೆ, ತನ್ನ ಖಜಾನೆ ಭರ್ತಿಮಾಡಿ, ತನ್ನಸೈನ್ಯಕ್ಕೆ ಚೆನ್ನಾಗಿಶಿಕ್ಷಣ ಕೊಡಿಸಿ, ಯುದ್ಧಕ್ಕೆಬೇಕಾದ

ಸಿದ್ಧತೆಗಳನ್ನು ಮಾಡಿಕೊಂಡು. ಮಂತ್ರಿಅಪ್ಪಾಜಿ ( ಸಾಲುವತಿಮ್ಮ ) ನಸಹಾಯ ಪಡೆದು, ದೋರರೆಂಬ ಶ್ರೀಮಂತರಸಹಾಯವನ್ನು ಸಹಪಡೆದನು. ಯುದ್ಧಕ್ಕೆಹೋಗುವ ಮುನ್ನ ವಿಜಯನಗರದಲ್ಲಿ ಭಾರಿ ಸಾರ್ವಜನಿಕಸಭೆ ಸೇರಿಸಿ ದೊಡ್ಡ ಔತಣಕೂಟ ಏರ್ಪಡಿಸಿದನು. ನಂತರತನ್ನರಾಜ್ಯವನ್ನು ರಕ್ಷಿಸಲು, ಕುದುರೆದಳವನ್ನು ಇಟ್ಟು ರಣಭೇರಿ ( War Drum ) ಯೊಡನೆ ಮಹಾಸೇನೆಸಮೇತ, ವಿಜಯನಗರದ ರಾಜಧಾನಿ ಬಿಟ್ಟನು. ಮೊಟ್ಟಮೊದಲು ಶಿವಸಮುದ್ರ, ಶ್ರೀರಂಗಪಟ್ಟಣ ವಶಮಾಡಿಕೊಂಡು, ಶ್ರೀ ರಂಗನಾಥಸ್ವಾಮಿ ಆಶೀರ್ವಾದಪಡೆದು, ಇಕ್ಕೇರಿ, ಆಗೆರಂ ಗೆದ್ದು ಸುಕ್ಕಲ ನಾಯಕನ ಸೇನೆ ಪರೀಕ್ಷಿಸಿ ತನ್ನಸೇನೆಯನ್ನು ಬಿಜಾಪುರದಗಡಿಕಡೆಗೆ ತಿರುಗಿಸಿದನು.

ರಾಯಚೂರು; ಮೂಡಗಲ್, ಆದವಾನಿಗಳಲ್ಲಿ ಕೃಷ್ಣರಾಯನು ತನ್ನಸೈನ್ಯ ಶಾಖೆಗಳನ್ನು ಇಟ್ಟನು. ಒಂದುದಿನಕ್ಕೆ ಒಂದುಕೋಟೆಯಂತೆಗೆಲ್ಲಲುಶುರುಮಾಡಿದನು. ರಾಯಚೂರುಕೋಟೆ ಆಕ್ರಮಿಸಿ ಗೋಲ್ಕೊಂಡಗಡಿಮುತ್ತಿದನು ಮೂವರು ಬಹುಮನಿ ಸುಲ್ತಾನರಾದ ಬಿಜಾಪುರದ ಆದಿಲ್‌ಷಾ, ಗೋಲ್ಕೊಂಡ ಕುತುಬ್‌ಷಾ, ಬೀದರಿನ ಬರೀದ್‌ಷಾ, ಮೂವರುಸೇರಿ ; ತಮ್ಮಸೇನೆ ಒಂದುಗೂಡಿಸಿ, ಕೃಷ್ಣಾನದಿಯ ದಕ್ಷಿಣ ಭಾಗದ ದಡದಲ್ಲಿ ತಮ್ಮದೇಶದ 100, 000 ಕುದುರೆ, 1000 ಆನೆ ಇಟ್ಟರು. ಮುಸ್ಲಿಂಮರದುಷ್ಕೃತ್ಯಗಳನ್ನು ನಾಶಮಾಡಲು, ಕೃಷ್ಣರಾಯನು ತನ್ನದಳಪತಿಯಾದ ರಾಮಲಿಂಗನಾಯ್ಡುವನ್ನು ಕಳುಹಿಸಿದನು. ಈತನು ರಾಯಚೂರು, ದೇವದುರ್ಗ, ಯಾದಗಿರಿ, ಗುಲ್ಬರ್ಗ: ಮುಂತಾದಕಡೆ ಅಂದರೆ ಕೃಷ್ಣಾನದಿ ದಕ್ಷಿಣವಿಜಯನಗರ ಪ್ರದೇಶದಲ್ಲಿ ನಡೆಯುತ್ತಿದ್ದ ಮುಸ್ಲಿಂಮರಹಾವಳಿ ತಪ್ಪಿಸಲು ಹೊರಟನು. ನಂತರ 120 ಆನೆಗಳು, 60,000 ಕುದುರೆಗಳು, 500,000 ಕಾಲಾಳುಗಳೊಡನೆ ಕೃಷ್ಣಾನದಿದಾಟಿ, ಮುಸ್ಲಿಂಮರೊಡನೆ ಯುದ್ಧಕ್ಕೆ ಅಣಿಯಾದನು. ಆದರೆ ಈ ಸಂದ ರ್ಭದಲ್ಲಿ' ಕೃಷ್ಣಾನದಿಪ್ರವಾಹ ಜೋರಾಯಿತು ಕೃಷ್ಣರಾಯನಕಡೆ $\frac{1}{3}$ ಭಾಗ ಸೇನೆ ಉಳಿಯಿತು. ಮಿಕ್ಕವರುನದಿಯ ಪಾಲಾದರು. ಈ ಪ್ರವಾಹನೋಡಿಆನೆ, ಕುದುರೆ ಗಳನ್ನುಬಿಟ್ಟು, ಸುಲ್ತಾನರು ಹಿಂದಕ್ಕೆ ಓಡಿಹೋದರು. ಕೃಷ್ಣ ರಾಯನು ಶತೃಗಳ, ಆನೆ, ಕದುರೆಗಳನ್ನುತನ್ನವಶಮಾಡಿಕೊಂಡನು. ಮಳೆಗಾಲವಾದಮೇಲೆ ಗಜಪತಿದೊರೆ ರಾಜ್ಯವನ್ನು ಮುತ್ತಲು ಕೃಷ್ಣರಾಯನು ಅನುವಾದನು.

ಈಗ ಗಜಪತಿ ವಿಜಯನಗರದ ಅನೇಕ ಭಾಗಗಳನ್ನು ಗೆದ್ದಿದ್ದನು. ಇದರಲ್ಲಿ ರಾಯಚೂರುಒಂದು. ರಾಯಚೂರಿನಲ್ಲಿ ಕೃಷ್ಣದೇವರಾಯನಿಗೂ, ಗಜಪತಿದೊರೆಗೂ, ಭಾರಿಕದನವಾಗಿ ಗಜಪತಿದೊರೆ ಸೋತು ತನ್ನಕ್ಷಮಾಪಣೆ ಕೇಳಿದನು. ಇದರಜೊತೆಗೆ ತನ್ನಮಗಳಾದ ಜಗನ್ಮೋಹಿನಿಯನ್ನು ಕೃಷ್ಣರಾಯನಿಗೆ ವಿವಾಹಮಾಡಿಸಿ, ಅನೇಕ ಆಭರಣ, ಕುದುರೆಗಳನ್ನು ಬಹುಮಾನವಾಗಿಕೊಟ್ಟು, ಕೃಷ್ಣಾನದಿಗೆ ದಕ್ಷಿಣಭಾಗದ

ತಾನುಗೆದ್ದಿದ್ದ ರಾಜ್ಯವನ್ನೆಲ್ಲ ಕೃಷ್ಣರಾಯನಿಗೆ ವಶಮಾಡಿಕೊಟ್ಟನು. ಆಗ ರಾಯ ಚೂರು ಪುನಃ ಕೃಷ್ಣರಾಯನಿಗೆವಶವಾಯಿತು. ಇಂದಿನರಾಯ ಚೂರ್ ಬಸ್‌ಸ್ಟಾಂಡಿನ ವ್ಯೂಪ್ ದೃಷ್ಟಿಯಿಂದ ದಕ್ಷಿಣ ಕೋಟೆಗೋಡೆಯ ಮೇಲಿನಿಂದ ಕೆಳಗಿನ ನಾಲ್ಕನೆಯ ಸಾಲಿನಅಂಚಿನಲ್ಲಿ, ದೊಡ್ಡ ಕಲ್ಲಿನಶಿಲಾಶಾಸನ ಇದೆ. " ಈ ಶಾಸನ ಕೋಟೆಯನ್ನು ಕಟ್ಟಿದವನ ವಿಚಾರವಾಗಿ ತೆಲುಗಿನಲ್ಲಿ ವಿಷಯ ತಿಳಿಸಿದೆ " ಈಶಾಸನದ ಬಲಭಾಗದಲ್ಲಿ ಒಬ್ಬ ಸಿಪಾಯಿಯಚಿತ್ರವು, ಎಡಭಾಗದಲ್ಲಿ ಗಣಪತಿವಿಗ್ರಹವೂ ಕೆತ್ತಿದೆ. ಆದರೆ ಮುಸ್ಲಿಮರು ಇದನ್ನು ಭಂಗಮಾಡಿದರು. ಆ ಗೋಡೆಗಳಮೇಲೆ, ಕೃಷ್ಣರಾಯನಿಗೂ ಗಜಪತಿದೊರೆಗೂ, ಅದ ಯುದ್ಧವರ್ಣನೆ ಚಿತ್ರ ರೂಪದಲ್ಲಿದೆ. ಕೃಷ್ಣದೇವರಾಯನ ಕಲ್ಲಿನ ಒಂದು ಚಕ್ರವುಳ್ಳ ರಥಗಳಸಾಲು ಕೆತ್ತಿದೆ. ಆ ರಥಗಳು ಯುದ್ಧದ ಧ್ವಜ ಪತಾಕಗಳಿಂದ ಕೂಡಿದೆ. ಗಜಪತಿ ದೊರೆಯ ಆನೆಗಳ ಸೇನೆ ಸಹಿತ ಕೆತ್ತಿದೆ. ಸೇನೆ ಬಿಲ್ಲು ಹಿಡಿದ ಚಿತ್ರ, ಬತ್ತಳಿಕೆ, ಬಿಲ್ಲುಗಳ ಚಿತ್ರ. ಚಕ್ರ, ಮದ್ದಿನ ಗುಂಡಿಗಳು, ಸಹ ಈ ಗೋಡೆಯಮೇಲೆ ಕೆತ್ತಿವೆ.

ಸೋತ ಬಹಮನಿ ಸುಲ್ತಾನರು, ಕೃಷ್ಣರಾಯನನ್ನು ಕ್ಷಮಾಪಣೆ ಕೇಳಿದರು ಪುನಃ ರಾಯಚೂರು ಮಾರ್ಗವಾಗಿ, ಕೃಷ್ಣರಾಯನು ಗುಲ್ಬರ್ಗಕ್ಕೆ ಹೋಗಿ, ಅದನ್ನು ಮುತ್ತಿ ವಶಮಾಡಿಕೊಂಡನು. ರಾಯಚೂರು, ಉಮ್ಮತ್ತೂರು, ಉದಯಗಿರಿ, ಮುಂತಾದ ಕೋಟೆಗಳನ್ನು ಗೆದ್ದು, ದಿಗ್ವಿಜಯ ಪಡೆದ ಕೃಷ್ಣರಾಯನು ರಾಜಧಾನಿಗೆ ಹಿಂತಿರುಗಿ, ವಿರೂಪಾಕ್ಷನಪೂಜೆಮಾಡಿ, ವಿಶೇಷದರ್ಬಾರ್‌ನಡೆಸಿ, ತನ್ನ ಸೈನಿಕರಿಗೆಲ್ಲಾ ಮರ್ಯಾದೆಮಾಡಿದನು. ಆದಿಲ್‌ಷಾ ಸಹಿತ ಯುದ್ಧದಲ್ಲಿ ಸತ್ತನೆಂದೂ, ಕೃಷ್ಣರಾಯನು ಆದಿಲ್‌ಷಾ ತಲೆಯನ್ನು ಕತ್ತರಿಸಿ; ಅವನ ತಲೆಯನ್ನು ಊರಲ್ಲಿ ಮೆರವಣಿಗೆ ಮಾಡಿದನೆಂದು, ಇತಿಹಾಸ ತಿಳಿಸುತ್ತದೆ. ಕೃಷ್ಣರಾಯನಿಗೆ, ತನ್ನ ಪರಾಕ್ರಮದ ಫಲವಾಗಿ ರಾಯ ಎಂಬ ಬಿರುದು ಬಂದಿತ್ತು. ಇದನ್ನು ತೆಲುಗಿನಲ್ಲಿ ರಾಯಲು, ತಮಿಳನಲ್ಲಿ ರಾಯರ್, ಕನ್ನಡದಲ್ಲಿ ರಾಯರು ಎಂಬುದಾಗಿ ಕರೆಯಲಾಯಿತು. ಕೃಷ್ಣದೇವರಾಯನಿಂದ ರಾಯಚೂರು ದಿಗ್ವಿಜಯ ವಾದಮೇಲೆ, ರಾಯಚೂರನ್ನು ಕೃಷ್ಣದೇವರಾಯನ ಜ್ಞಾಪಕಾರ್ಥವಾಗಿ, ಜನರು ತೆಲುಗಿನಲ್ಲಿ ರಾಯಲು ಊರು ಎಂದೂ, ತಮಿಳನಲ್ಲಿ ರಾಯರ್ ಊರು ಎಂದೂ, ಕನ್ನಡದಲ್ಲಿ ರಾಯರ ಊರು ಎಂಬುದಾಗಿಕರೆಯಲು ಪ್ರಾರಂಭಿಸಿದರು.

ಕ್ರಿ. ಶ. 1530 ರಿಂದ 1542 ರ ವರೆಗೆ, ಅಚ್ಯುತರಾಯನು ವಿಜಯ ನಗರದ ಸಿಂಹಾಸನ ಹತ್ತಿದನು. ಕ್ರಿ. ಶ. 1534-1535 ರ ಶಿಲಾಶಾಸನ, ಅಚ್ಯುತರಾಯನು, ರಾಯಚೂರು ಕದನದಲ್ಲಿ (ಕೃಷ್ಣಾನದಿ ದಡದಲ್ಲಿ ನಡೆದ) ಪಾತ್ರವಹಿಸಿದ್ದನೆಂದು ತಿಳಿಸುತ್ತದೆ. ಡಾ|| ಎನ್. ವೆಂಕಟರಮಣಯ್ಯನವರ, ಥರ್

ಡೈನಾಸ್ಟಿ ಆಫ್ ವಿಜಯನಗರ ಎಂಬ ಗ್ರಂಥ ಅಚ್ಯುತನ ದೀರ್ಘವಾದ ವಿಚಾರ ಬಯಲುಮಾಡುತ್ತೆ. ರಾಜನಾಥಡಿಂಡಿಮನಿಂದ ರಚಿತವಾದ, ಅಚ್ಯುತರಾಯಾಭ್ಯುದಯವು, ಎಂಬತೆಲುಗು ಗ್ರಂಥದಪ್ರಕಾರ ಕೃಷ್ಣದೇವರಾಯನ ನಂತರ ಅಚ್ಯುತರಾಯನು ಸಿಂಹಾಸನಕ್ಕೆಬಂದನು. ಈ ಅಚ್ಯುತನು ಚೋಳರಾಜ್ಯಗೆದ್ದು, ಕಂಚಿ, ಕಾಳಹಸ್ತಿ ವರೆವಿಗೆ ಹೋಗಿ ಪಾಂಡ್ಯರಾಜ್ಯವನ್ನು ಗೆದ್ದು, ಚೇರರಾಜನನ್ನು ಬಂದೀಖಾನೆಯಲ್ಲಿಟ್ಟನು. ನಂತರ ಅಲ್ಲಿಂದ ಬಿಜಾಪುರದ ಸುಲ್ತಾನನ ಪ್ರದೇಶಕ್ಕೆಕಾಲಿಟ್ಟನು. ಬಿಜಾಪುರದ ಸುಲ್ತಾನನಿಗೆ " ಹಯಪತಿ " ಎಂಬ ಅಡ್ಡಹೆಸರಿತ್ತು. ಆಗ್ಗೆ ಬಿಜಾಪುರದಸುಲ್ತಾನನು, ರಾಯಚೂರನ್ನು ತನ್ನಬಲವಾದ ಸೇನೆಯೊಡನೆ ರಕ್ಷಿಸುತ್ತಾ ಇದ್ದರು. ಅಚ್ಯುತನು ರಾಯಚೂರಿಗೆ ಮುತ್ತಿಗೆ ಹಾಕಿದನು. ಘಾರಿಕದನವಾಯಿತು. ರಾಯಚೂರು, ಅಚ್ಯುತರಾಯನ ವಶವಾಯಿತು. ತಿರುಮಲಾಂಬನಿಂದ ರಚಿತವಾದ " ವರದಾಂಬಿಕ ಪರಿಣಯಂ " ಎಂಬತೆಲುಗು ಗ್ರಂಥದಪ್ರಕಾರ ಅಚ್ಯುತರಾಯನ ಕಾಲದ ನರಸನು, ರಾಯಚೂರಿನಲ್ಲಿ ಮುಸ್ಲಿಂಮರ ಹಾವಳಿ ಕೊನೆಗಾಣಿಸಿ, ಹೈದರಾಬಾಬ್‌ವರೆಗೆಹೋಗಿ, ಬಹಮನಿಯ ಯೂಸುಫ್ ಆದಿಲ್‌ಷಾ, ರವರನ್ನು ಸೋಲಿಸಿದನು. ಈ ಜಯಭೇರಿಆದಮೇಲೆ ನರಸನು ತನ್ನ ರಾಜಧಾನಿಗೆ ಹಿಂತಿರುಗಿದನು.

ಡಾ|| ಟಿ. ವಿ. ಮಹಾಲಿಂಗಂ ರವರ ವಿಜಯನಗರದ ಗ್ರಂಥದಪ್ರಕಾರ, ( Administration and social life under Vijayanagar. ) ರಾಯಚೂರು, ದೇವದುರ್ಗ, ಆದೋನಿ ಒಡಗೂಡಿದ ಇಡೀ ಕರ್ಣಾಟಕದಲ್ಲಿ ದೇವದಾಸಿಯರ ಸ್ವರ್ಗವಾಗಿತ್ತು. ಆಗಿನ ಕಾಲದಲ್ಲಿ ದೇವದಾಸಿಯರು ದುರ್ನಡತೆಯಿಂದ ಪಟ್ಟಣದ ದೊಡ್ಡ ದೊಡ್ಡ ರಾಜವೀಧಿಗಳಲ್ಲಿ ವಾಸಿಸುತ್ತಾ ಇದ್ದರು. ಆಗಿನ ಕಾಲದಲ್ಲಿ ಅವರಿಗೆ ಎಲ್ಲರಿಗಿಂತಲೂ ವಿಶೇಷ ಮರ್ಯಾದೆ ಕೊಡುತ್ತಿದ್ದರು. ಈ ದೇವದಾಸಿಯರು ವೀಳೆಯದೆಲೆಇಗಿಯುವುದರಲ್ಲಿಪ್ರವೀಣರಾಗಿದ್ದರು. ಡಾ| ಟಿ.ವಿ. ಮಹಾಲಿಂಗಂಪ್ರಕಾರ (In Vijayanagar Empire, Prostitution was legalised) ಅಂದರೆ ವೇಶ್ಯಾವೃತ್ತಿ ಆಚರಣೆಗೆ ವಿಜಯನಗರ ಸರ್ಕಾರ ಕಾನೂನುಮಾಡಿ ಅನುಮತಿ ಕೊಟ್ಟಿತ್ತು. ಈ ಮೇಲ್ಕಂಡ ವಿಚಾರಕ್ಕೆ ಪೋರ್ಚುಗೀಸ್ ಪ್ರವಾಸಿಕನಾದ ಪೇಸ್ (Paes) ಮುಖ್ಯ ಆಧಾರವಾಗಿದ್ದಾನೆ. ಈ ದೇವದಾಸಿಯರು, ದೇವಸ್ಥಾನಗಳ ಮಹಾದ್ವಾರಗಳ ಮುಂದೆ ನಿಂತು ನರ್ತನ ಮಾಡಿ, ದೇವರ ದರ್ಶನ ಪಡೆಯುವರಿಂದ ಹಣ ಕಿತ್ತು, ತಮ್ಮ ಜೀವನ ಮಾಡುತ್ತಿದ್ದರು. ವಿಜಯನಗರದ ಅರಸರು ವೇಶ್ಯಾವೃತ್ತಿಗೆ ಪೂರ್ಣ ಬೆಂಬಲ ನೀಡುತ್ತಿದ್ದರು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರಾಯಚೂರು ಕೋಟೆ ರಕ್ಷಣೆಗೋಸ್ಕರ ಉಪಯೋಗಿಸುತ್ತಾ ಇದ್ದರು. ಈ ರಾಯಚೂರು ಕೋಟೆಯಲ್ಲಿ ಸದಾ

ಯುದ್ಧ ಕಾಲದ ಮತ್ತು ರಕ್ಷಣೆಯ ಆಯುಧಗಳು ಇದ್ದವು ಈ ಕೋಟೆಯನ್ನು ರಕ್ಷಣೆ ಮಾಡುವದಕ್ಕೆ ಅಮರನಾಯಕ ಎಂಬ ಅಧಿಕಾರಿಯನ್ನು ಕೃಷ್ಣದೇವರಾಯನು ನೇಮಿಸಿದ್ದನು. ವಿಜಯನಗರದಕಾಲದಲ್ಲಿ ವೀರಶೈವ ಮಠಗಳು ಈ ರಾಯಚೂರಿನಲ್ಲಿ ಇಮ್ಮಡಿ ಆದವು. ಈ ಮಠಗಳಲ್ಲಿ ಧಾರ್ಮಿಕ ಸಂಭಂದವಾದ ವಿದ್ಯೆ ಬಾಲಕರಿಗೆ ಹೇಳಿ ಕೊಡುತ್ತಿತ್ತು. ಜನರು ವನ ವಿಹಾರದಲ್ಲಿ, ಜಲಕ್ರೀಡೆಯಲ್ಲಿ, ಮೇಳಗಳಲ್ಲಿ ಕಾಲ ಕಳೆಯುತ್ತಿದ್ದರು. ರಾಯಚೂರಿನಲ್ಲಿ ವೈಶ್ಯರು ಈ ಕಾಲದಲ್ಲಿ ವ್ಯಾಪಾರದಲ್ಲಿ ಪ್ರಗತಿ ಪಡೆದಿದ್ದರು. ಒಕ್ಕಲಿಗರು ಹೊಲ ಉಳುತ್ತಿದ್ದರು. ವರ್ತಕರ ಸಂಘಗಳು ಬಹಳ ವಾದವು. ಹಳ್ಳಿ ಕೋರ್ಟುಗಳಿಂದ ಧರ್ಮಶಾಸನಗಳು, ಹಳ್ಳಿ ವ್ಯಾಜ್ಯಗಳನ್ನು ತೀರ್ಮಾನ ಮಾಡುತ್ತಿದ್ದರು. ಕೊತ್‌ವಾಲ್ ಎಂಬ ಪೋಲೀಸ್ ಅಧಿಕಾರಿ ಹಳ್ಳಿಯ ರಕ್ಷಣೆ ಮಾಡುತ್ತಿದ್ದನು. ತಳವಾರರು ಹಳ್ಳಿಯ ಯೋಗಕ್ಷೇಮವಿಚಾರಿಸುತ್ತಾ ಇದ್ದರು

ಕವಿಗಳುಎಂಬ ಓಲೆಗರ ದರಖಾಸ್ತುಗಳಲ್ಲಿ ರಾಯಚೂರಿನಸುತ್ತಮುತ್ತಲಿನ ಜಮೀನುಗಳ ಲೆಕ್ಕ ಪತ್ರಗಳು ಬರೆಯಲ್ಪಟ್ಟವು. ಆಗ್ಗೆ ರಾಯಚೂರಿನಲ್ಲಿ ಜನರು ಮದುವೆಸುಂಕ ಕೊಡಬೇಕಾಗಿತ್ತು. ಇದಕ್ಕೆಪೆಂಡ್ಲಿಸುಂಕಎಂದುಹೆಸರು. ಆಗಸರೂಸಹ ತೆರಿಗೆಕೊಡಬೇಕಾಗಿತ್ತು. ಜಮೀನಿನಜಮಾಬಂದಿಸಹಿತ ನಡೆಯುತ್ತಿತ್ತು. ರಾಯಚೂರಿನಲ್ಲಿ ಈ ಕಾಲದಲ್ಲಿ ಗವರ್ನರ್‌ಆಡಳಿತ ಏರ್ಪಾಡಾಗಿತ್ತು. ಈ ಗವರ್ನರರಿಗೆ ದುರ್ಗ ದಂಡನಾಯಕ ಎಂದುಹೆಸರು. ಇಂದಿಗೂಸಹ ರಾಯಚೂರನ್ನು ಆಳಿದ ದೇವದುರ್ಗ ದಂಡನಾಯಕನ ಜ್ಞಾಪಕಾರ್ಥವಾಗಿ, ದೇವದುರ್ಗ ಎಂಬ ತಾಲ್ಲೂಕು ರಾಯಚೂರು ಜಿಲ್ಲೆಯಲ್ಲಿಸೇರಿ ಪ್ರಕಾಶಮಾನವಾಗಿದೆ. ಹಳ್ಳಿಗಳನ್ನು ಅಯ್ಯಗಾರರು ನೋಡಿಕೊಳ್ಳುತ್ತಿದ್ದರು. ಶಾನುಭೋಗರು, ಹಳ್ಳಿಯ ಲೆಕ್ಕಪತ್ರಗಳನ್ನು ಇಡುತ್ತಿದ್ದರು. ಹಯವದನ ರಾವ್‌ರವರ ಗೆಜಿಟೀರ್ ಗ್ರಂಥ, ಪ್ರೊಫೆಸರ್ ಕೆ.ಎ. ನೀಲಕಂಠಶಾಸ್ತ್ರಿಗಳ ಫರ್‌ದರ್

ಸೋರ್‌ಸಸ್ ಭಾಗಒಂದು ಮತ್ತುಎರಡು, ಗ್ರಂಥಗಳು ವಿಜಯನಗರದ ಸಿಕ್ಸ್‌ಸೆಂಟಿನರಿ ಕಮ್ಮೋಮರೇಷನ್ ವಾಲ್ಯೂಂ ಎರಡು ಗ್ರಂಥಗಳು, ವಿಜಯನಗರದ ಬಗ್ಗೆ ಬಹಳವರ್ತಮಾನ ನಮಗೆತಿಳಿಸುತ್ತವೆ.

ಕ್ರಿ.ಶ.1542ರಿಂದ 1565ರ ವರೆಗೆ ವಿಜಯನಗರದ ಸಿಂಹಾಸನವನ್ನು ಆಳಿಯ ರಾಮರಾಯನು, ಹತ್ತಿದನು ರಾಮರಾಯನು ಅತ್ಯಂತ ಸುಖದಿಂದ ಕೂಡಿ ರಾಜ್ಯಾಡಳಿತದಲ್ಲಿ ಹೆಚ್ಚಿನ ದಕ್ಷತೆತೋರಿಸಲಿಲ್ಲ. ರಾಮರಾಯನ ತಿಳಿಗೇಡಿತನದಿಂದ, ಆದಿಲ್‌ಷಾನ ಪ್ರಾಬಲ್ಯ ಜಾಸ್ತಿ ಆಯಿತು. ರಾಮರಾಯನ ಅಯೋಗ್ಯವಾದ ಆಡಳಿತ ವಿಜಯನಗರ ಹೀನಸ್ಥಿತಿಗೆ ಬಂದಿತು, ಬಿಜಾಪುರದ ಆದಿಲ್‌ಷಾ ರಾಯಭಾರಿಯಾದ ಮಹಲ್‌ಬಾರನು ,ವಿಜಯನಗರದ ರಾಜಧಾನಿಗೆ ಬಂದನು. ಆ ರಾಯಭಾರಿಯನ್ನು ಆನಂದಮಹಲ್ ಅರಮನೆಯಲ್ಲಿ ಸತ್ಕರಿಸಲಾಯಿತು.

ನಂತರ ಕೆಲವು ದಿವಸದನಂತರ, ತೆಲುಗು ದೊಂಬರ ಕುಣಿತನೋಡಿ ರಾವ
ರಾಯನು, ಸಂತೋಷಪಟ್ಟು ಅವರಿಗೆ ಬಹುಮಾನಮಾಡಿದನು. ಮುಸ್ಲಿಂಮರಿಗೆ ಹಂ
ಕಂಡರೆಬಹಳಕೋಪ ಅಳಿಯರಾಮರಾಯನು, ಮಹಲ್‌ದಾರನ ಬಿಡಾರಕ್ಕೆ ಹೋ
ಕೊಳೆತಹಂದಿಮಾಂಸ ತುಂಬಿದನು. ಇದರಿಂದಬಿಜಾಪುರದ ಸುಲ್ತಾನನ ರಾಯಭಾ
ಮಹಲ್‌ದಾರನು ಅವಮಾನಿತನಾಗಿ, ಹಿಂತಿರುಗಿ, ಆದಿಲ್‌ಷಾಹತ್ತಿರ ಹೂಜೂ
ನಾನು ವಿಜಯನಗರಕ್ಕೆ ಹೋಗಿದ್ದೆ, ಅಲ್ಲಿಮುಸ್ಲಿಂರು ಜೀವನಮಾಡುವುದು ಕಷ್
ವಿಜಯನಗರ ಸಾಮ್ರಾಜ್ಯ ಇರುವವರೆಗೂ, ನಮ್ಮ ಮುಸ್ಲಿಂಮರ ಏಳಿಗೆ ಆಗುವದಿ
ಎಂದು ಹೇಳಿದನು. ಇದೇ ವಿಚಾರವನ್ನು, ಈ ರಾಯಭಾರಿ ಬೀದರ್ ಸುಲ್ತಾನನಿಗೂ
ನೈಜಾಂಷಾಗೂ, ಹೇಳಿ ಅವರೆಲ್ಲರೂ, ರಾಮರಾಯನಮೇಲೆ ದ್ವೇಷ ಇಡುವಂತೆ ಮಾ
ದನು. ನಂತರಎಲ್ಲರೂ, ಒಂದಾಗಿ ರಾಮರಾಯನನ್ನು ಸೋಲಿಸಲು ಸಿದ್ಧರಾದರು.

ರಾಮರಾಜನುಸಹಯುದ್ಧಕ್ಕೆ ಅಣಿಯಾದನು. ಈ ಅಳಿಯರಾಮರಾಯನು
ಸದಾಶಿವರಾಯನನ್ನು ಈ ಸಂದರ್ಭದಲ್ಲಿ ಬಂಧೀಖಾನೆಯಲ್ಲಿಟ್ಟಿದ್ದು, ಅವ
ಮೂರ್ಖತನತೋರಿಸಿತು. ಇದರಿಂದ, ವಿಜಯನಗರದ ರಾಜ್ಯದಲ್ಲಿ ಜನರಲ್ಲಿ ಒಡಕ
ಉಂಟಾಯಿತು. ಎಲ್ಲಾಮುಸ್ಲಿಂ ಸೇನೆ ಬಿಜಾಪುರದಲ್ಲಿ ಸೇರಿತು. ಡಿಸೆಂಬರ್ 25ನೆ
ತಾರೀಖಿನ ಕ್ರಿ. ಶ 1564ರಲ್ಲಿಬಿಜಾಪುರದಸೇನೆ, ವಿಜಯನಗರದಕಡೆಹೊರಟಿತು
ಕ್ರಿ. ಶ. 1565 ರಲ್ಲಿ ಜನವರಿ 23 ನೇ ತಾರಿಖು ತಾಳಿಕೋಟೆ ಯುದ್ಧಶುರುವ
ಯಿತು. ನೈಜಾಂಷಾ, ಕೃಷ್ಣನದಿಹತ್ತಿರ ಸುಲ್ತಾನ್‌ಪುರದ ಹತ್ತಿರ ಸೇನೆಇಟ್ಟನು
ಮಹಿಬರ್‌ಹಿಂಬಾಲ್, ಕುತುಬ್‌ಷಾ, ರಾಯಚೂರು, ಮತ್ತು ಮೂಡಗಲ್, ಮಧ
ತನ್ನಸೇನೆಇಟ್ಟನು. ರಾಮರಾಜ ರಾಕ್ಷಸತಂಗಡಿಗೆ ತನ್ನ ಸ್ವಂತ ಸೇನೆ ಕಳಹಿಸಿದ
ಕದನದಲ್ಲಿ ಅರವೀಡು ವಂಶದ ಮೂವರು ಅಣ್ಣತಮ್ಮಂದಿರು ಭಾಗವಹಿಸಿದ್ದರ
ರಾಮರಾಜ ಮಧ್ಯ ತಿರುಮಲರಾಮರಾಜನ ಎಡಗಡೆ ವೆಂಕಟಾದ್ರಿ ಬಲಗಡೆ ಯುದ್ಧ
ಶುರುವಾಯಿತು ಇಪ್ಪತ್ತೇಳುದಿವಸಗಳು ಕದನವಾಯಿತು. ಯುದ್ಧದಲ್ಲಿ ರಾಮರಾ
ನು ಸತ್ತನು. ಸದಾಶಿವ ಪೆನುಗೊಂಡೆಗೆ ವಿಶ್ರಾಂತಿಗಾಗಿ ಓಡಿಹೋದನು.

ಕ್ರಿ. ಶ. 1557 ರಲ್ಲಿ ಅಲಿ ಆದಿಲ್ ಷಾ ರಾಯಚೂರು ಮಾರ್ಗವಾ
ವಿಜಯನಗರ ರಾಜಧಾನಿಗೆ ಹೋಗಿ, ಅದನ್ನು ಮೂರು ತಿಂಗಳ ಮುತ್ತಿದನ
ಸುಮಾರು 24 ಲಕ್ಷ ವರಹಗಳನ್ನು ಐದು ಆನೆಗಳನ್ನು ಬಹುಮಾನವಾಗಿ ಪಡೆದ
ಆದಿಲ್ ಷಾ ಬಜಾಪುರಕ್ಕೆ ಹೊರಟನು. ಪ್ರಸಿದ್ಧ ತೆಲುಗು, ಗ್ರಂಥವಾದ ರಾಮರಾ
ಮು ರಾಮರಾಜನಿಂದ ರಚಿತವಾದ ವಸುಚರಿತ್ರಮು, ಅನಂತಾರ್ಯನಿಂದ ರಚಿತ
ದ ಪ್ರಪನ್ನಾಮೃತಂ. ತಂಜಾವೂರಿನ ವಿಜಯರಾಘವನಾಯಕನಿಂದ ರಚಿತವಾ
ರಘುನಾತಾಭ್ಯುದಯ ಮುಂತಾದ ಗ್ರಂಥಗಳು ತಾಳಿಕೋಟಕದನಕ್ಕೆ ಆಧಾರಗಳ

ನಿಂತಿವೆ. ಪ್ರೊಫೆಸರ್ ಆರ್ ಸತ್ಯನಾಥಅಯ್ಯರ್‌ರವರ ಜರ್‌ನಲ್ ಆಫ್ ಇಂಡಿಯನ್ ಹಿಸ್ಟರಿಯಲ್ಲಿ ಪಾರ್ಟ್ ಒಂದು ಭಾಗ ವ್ಯಾನರ ಗ್ರಂಥದ ತಾಳೀಕೋಟಿ ಲೇಖನ ಸಹಿತ. ತಾಳಿಕೋಟಿ ಕದನದ ಫಲಿತಾಂಶಕ್ಕೆ ಆಧಾರವಾಗಿದೆ.

ತಾಳಿಕೋಟಿಯುದ್ಧವಾದಮೇಲೆ, ಬಿಜಾಪುರದ ಸುಲ್ತಾನರು ರಾಯಚೂರನ್ನು ತಮ್ಮ ಕೈವಶ ಮಾಡಿಕೊಂಡರು. ಕ್ರಿ. ಶ. 1565 ರ ಶಾಸನದ ರೀತ್ಯ, ತಾಳಿಕೋಟೆ ಯುದ್ಧವಾದಮೇಲೆ ರಾಯಚೂರು ವಿಜಯನಗರದ ಕೈ ಬಿಟ್ಟುಹೋಯಿತು. ಇನ್ನುಮೇಲೆ ವಿಜಯನಗರದ ಗಡಿ ರಾಯಚೂರು ಆಗಲಿಲ್ಲ. ತುಂಗಭದ್ರಾನದಿ ದಕ್ಷಿಣ ಪ್ರದೇಶ ಅವರ ಗಡಿಯಾಗಿ ತೀರ್ಮಾನವಾಯಿತು. ಇದಕ್ಕೆ ಆಧಾರಗಳು (1) ಶ್ರೀರಂಗ ಕೃಷ್ಣಾಪುರಂ ಕಾಪರ್ ಪ್ಲೇಟ್ಸ್ (ಕ್ರಿ. ಶ. 1575-78) ಅಹೋಬಳರ ಶಿಲಾ ಶಾಸನ ( ಕ್ರಿ.ಶ.1584-85 ) ಅಮಿನ್ ಉಲ್‌ಮುಲ್ಕನ ಅಮೀನಾಬಾದ್ ಶಾಸನ (ಕ್ರಿ. ಶ. 1592-93), ಸಿದ್ದೌಟ ಶಾಸನ (ಕ್ರಿ. ಶ 1605)

ಕ್ರಿ. ಶ 1565 ರಿಂದ 1572 ರ ವರೆಗೆ ಆಳಿದ ವಿಜಯನಗರದ ಅರಸರಾದ, ಶ್ರೀರಂಗ, ತಿರುಮಲ, ವೆಂಕಟ ಮತ್ತು ಮೂರನೆಯ ಶ್ರೀರಂಗ ಮುಂತಾದವರು. ಕೈಬಿಟ್ಟಹೋದ ಪ್ರದೇಶಗಳನ್ನು ಗೆಲ್ಲಲು ಪ್ರಯತ್ನಪಟ್ಟಾಗ್ಯೂ ಸಾಧ್ಯವಾಗಲಿಲ್ಲ. ಕೈಬಿಟ್ಟಹೋದ ರಾಯಚೂರು ಪುನಃ ಹಿಂದೂಗಳ ಕೈಸೇರಲಿಲ್ಲ. ಮುಸ್ಲಿಂಮರ ಪ್ರಭಾವ ಅತಿಯಾಯಿತು.

( Extract )

ಸಂಕ್ಷಿಪ್ತವಾಗಿ ಮೊಗಲರ ಕಾಲದಲ್ಲಿ ರಾಯಚೂರಿನ ಹಣೆಬರಹ ನೋಡೋಣ. ಈ ಮೊಗಲರ ಸಾಮ್ರಾಜ್ಯ ಕ್ರಿ. ಶ. 1526 ರಿಂದ 1761 ರ ವರೆಗೆ ಇತ್ತು. ಹೈದರ್ ಅಲಿ ಮತ್ತು ಟಿಪ್ಪು ಸಹ ರಾಯಚೂರನ್ನು ಒಳಗೊಂಡ ಕೃಷ್ಣಾನದಿ ದಡದವರೆವಿಗೂ ಸಹ ತಮ್ಮ ರಾಜ್ಯ ವಿಸ್ತಾರ ಮಾಡಿದ್ದಾರೆ.

ಮೊಗಲರ ಕಾಲದಲ್ಲಿ ರಾಯಚೂರಿನಲ್ಲಿ ವಕೀಲರ ಸಂಖ್ಯೆ ಹೆಚ್ಚಾಯಿತು. ಹಣಕಾಸಿನ ಅಧಿಕಾರಿಗೆ ದಿವಾನ್ ಎಂಬುದಾಗಿಯೂ, ಲೆಕ್ಕಪತ್ರಗಳನ್ನು ನೋಡುವವನಿಗೆ ಮೀರ್‌ಬಕ್ಷಿ ಎಂದೂ. ಶಾಸನಕಾರದ ಅಧಿಕಾರಿಗಳಿಗೆ ಕ್ವಾಜಿ ಎಂದೂ, ಕರೆಯಲಾಯಿತು. ರಾಯಚೂರಿನಲ್ಲಿ ಕೊತ್ವಾಲ್ ಎಂಬ ಅಧಿಕಾರಿಗಳು ಇದ್ದರು. ಇವರು ಪೋಲಿಸ್ ಅಧಿಕಾರಿಗಳು. ಅಕ್ಬರ್ ಕಾಲದಲ್ಲಿ ರಾಯಚೂರು ಕ್ಷೇಮದಿಂದ ಇತ್ತು. ಜಹಾಂಗಿರ್ ಶುದ್ಧ ವ್ಯಭಿಚಾರಿ. ಷಹಜಹಾನನು, ಸುನ್ನಿ ಪಂಗಡದವನು. ದಕ್ಷಿಣದ ಬಹುಮನಿ ಸುಲ್ತಾನರು, ಷಿಯಾ ಪಂಗಡದವರು. ಷಿಯಾ ಸುನ್ನಿ ಪಂಗಡದವರಿಗೆ, ಬದ್ಧದ್ವೇಷ. ಷಹ

ಜಾಹನ್, ಬಿಜಾಪುರದ ಸುಲ್ತಾನರನ್ನು ಗೆದ್ದು, ತನ್ನ ಮೂರನೆಯ ಮಗನಾದ ಔರಂಗಜೇಬನ ಆಳ್ವಿಕೆಗೆ ಬಿಟ್ಟನು. ಆಗ ರಾಯಚೂರ, ಔರಂಗಜೇಬನ ಆಳ್ವಿಕೆಗೆ ಒಳಪಟ್ಟಿತು. ಔರಂಗಜೇಬನ ಕಾಲದಲ್ಲಿ. ದಕ್ಷಿಣ ಹಿಂದುಸ್ಥಾನದಲ್ಲಿ ಮುಸ್ಲಿಂ ಮತಾಂತರದ ಗಲಾಟೆ, ವಿಪರೀತವಾಯಿತು. ರಾಯಚೂರು ಔರಂಗಜೇಬನ ಕಾಲದಲ್ಲಿ ಡೆಲ್ಲಿ ಮೊಗಲ್ ಸರ್ಕಾರದ ಅಧೀನದಲ್ಲಿ ಸೇರಿತು. ಹೈದರಾಬಾದ್ ಸ್ಟೇಟ್ ನಿರ್ಮಾಣವಾಗಿ ಅದು ಸ್ವತಂತ್ರವಾದ ವೇಳೆ ರಾಯಚೂರು ಡೆಲ್ಲಿ ಅಧಿಕಾರದಿಂದ ಬಿಡುಗಡೆಹೊಂದಿತು. ಕ್ರಿ. ಶ. 1853 ರ ಒಪ್ಪಂದದ ಪ್ರಕಾರ ರಾಯಚೂರು ಬ್ರಿಟಿಷರಿಗೆ ಸೇರಿತ್ತು. ಆದರೆ ಕ್ರಿ.ಶ. 1860 ರಲ್ಲಿ ನೈಜಾಮನಿಗೆ ಬ್ರಿಟಿಷರಿಂದ ಕೊಡಲ್ಪಟ್ಟಿತ್ತು. ಕ್ರಿ. ಶ. 1860 ರಿಂದ ಇಲ್ಲಿಯವರೆಗೂ ಅಂದರೆ ನವಂಬರ್ 1956 ರ ವರೆಗೆ. ರಾಯಚೂರು ಹೈದರಾಬಾದ್ ಸಂಸ್ಥಾನದ ಪ್ರಾಮುಖ್ಯ ಜಿಲ್ಲೆಯಾಗಿ. ನೈಜಾಮನ ಆಳ್ವಿಕೆಗೆ ಒಳಪಟ್ಟಿದೆ. ನವಂಬರ್ 1956 ರಿಂದ ನಮ್ಮ ರಾಯಚೂರು ವಿಶಾಲ ಮೈಸೂರಿನ ಬಹು ಮುಖ್ಯವಾದ ಪ್ರಾಂತವಾಗಿ ಮುಂದಿನ ಪ್ರಗತಿಪರ ಭವಿಷ್ಯವನ್ನು ಕಾದು ನೋಡುತ್ತಿದೆ.



# — ಅನುಬಂಧ 1 —

"ಹೈದರಾಬಾದ್ ಸ್ಟೇಟಿನ ಇಂಪೀರಿಯಲ್ ಗೆಜಟೀರ್ ಆಫ್ ಇಂಡಿಯಾ ಗ್ರಂಥ" ರಾಯಚೂರಿನ ಬಗ್ಗೆ ಈ ಕೆಳಗೆ ಕಂಡಂತೆ ಹೇಳುತ್ತದೆ.

"ಮಹಮ್ಮದೀಯರು ರಾಯಚೂರನ್ನು ಮುತ್ತುವದಕ್ಕೆ ಮುನ್ನ, ರಾಯಚೂರು ವಾರಂಗಲ್ ರಾಜ್ಯದ ಒಂದು ಭಾಗವಾಗಿತ್ತು. ಮಹಮ್ಮದ್‌ಬಿನ್ ತೊಗಲಕ್ಕನ ಮರಣದ ನಂತರ, ಬಿಜಾಪುರದ ಆದಿಲ್‌ಷಾಯಿಗಳ ಆಧೀನಕ್ಕೆ ರಾಯಚೂರು ಸೇರಿತು. ಔರಂಗಜೇಬನು ಬಿಜಾಪುರ ಗೆದ್ದಮೇಲೆ ರಾಯಚೂರು ಡೆಲ್ಲಿಯ ಆಳ್ವಿಕೆಗೆ ಒಳಪಟ್ಟಿತು. ರಾಯಚೂರು ಕೋಟೆಯನ್ನು ಕಟ್ಟಿದವನು ಗೋರೆ ಗಂಗಯ್ಯ ರುದ್ದಿವರು. ಇವನು ಕ್ರಿ ಶ. 1294 ರಿಂವ 1301 ರ ವರೆಗೆ ಆಳಿದ ವಾರಂಗಲ್ ರಾಜನ ಮಂತ್ರಿಯಾಗಿದ್ದನು. ಈ ರಾಯಚೂರು ಜಿಲ್ಲೆಗೆ ಸೇರಿದ ದೇವದುರ್ಗ, ಅಲಂಪೂರ್, ಯಾದಗಿರಿ, ಮಲ್ಲಿಯಾಬಾದ್‌ಗಳಲ್ಲಿ ಹಳೇಕೋಟೆ ದುರ್ಗಗಳು ಇವೆ. ಕೊಪ್ಪಳ, ಗಬ್ವಾಲ್, ದೇವದುರ್ಗ, ಯಾದಗಿರಿ, ಗಂಗಾವತಿ, ಲಿಂಗಸುಗೂರು, ಸಿಂಧನೂರು, ಕಲ್ಲೂರು, ಮಾನ್ವಿ, ಮುಂತಾದವು ಈಗಿನ ರಾಯಚೂರು ಜಿಲ್ಲೆಗೆ ಸೇರಿವೆ.

ರಾಯಚೂರು ಜಿಲ್ಲೆಯಲ್ಲಿ 90% ಹಿಂದೂಗಳೂ 10% ಮುಸ್ಲಿಂಮರೂ ಇದ್ದಾರೆ. ಕೊಪ್ಪಳದ ಮತ್ತು ಎಲ್‌ಬುರ್ಗದ ಎರಡು ಜಹಗೀರು ತಾಲ್ಲೋಕುಗಳು ಸಾಲಾರ್ ಜಂಗ್ ಮನೆತನಕ್ಕೆ ಸೇರಿದ್ದವು. ರಾಯಚೂರು ತಾಲ್ಲೋಕಿನ ಜನರು 60% ವ್ಯವಸಾಯದಲ್ಲಿ ನಿರತರಾಗಿದ್ದಾರೆ. ರಾಯಚೂರು ಜಿಲ್ಲೆಯ ಯಲಗೆರಕ್ಕೆ ಎರಡು ಮೈಲುಗಳ ದೂರದಲ್ಲಿರುವ ಗುಂಜಹಳ್ಳಿ ಕೆರೆ ಬಹಳ ದೊಡ್ಡದಾಗಿದೆ.

ಹದಿನೇಳನೆಯ ಶತಮಾನದಲ್ಲಿ ರಾಯಚೂರಿನಲ್ಲಿ ಮಲ್ಲಿಕ್‌ಅಂಬರನ ರೆವಿನ್ಯೂ ಪದ್ಧತಿ ಆಚರಣೆಗೆ ಬಂದಿತು. ಕ್ರಿ.ಶ. 1866 ರಲ್ಲಿ ರೈತವಾರಿ ಜಮೀನು ಪದ್ಧತಿ ಆಚರಣೆಗೆ ಶುರುವಾಯಿತು. ಕ್ರಿ. ಶ. 1549 ರಲ್ಲಿ ಇಬ್ರಾಹಿಂ ಆದಿಲ್ ಷಾ ಕೋಟೆಯ ಹೊರಗಡೆಯ ಬಾಗಿಲುಗಳನ್ನು ಕಟ್ಟಿಸಿದನು. (Main Gate Way) ಈ ಕೋಟೆಯಲ್ಲಿ 200 ಅಡಿ ಉದ್ದ ಪುರಾತನ ತೋಪು ಇದೆ. ಕೋಟೆಯ ಪೂರ್ವದ ಬಾಗಿಲಿನ ಹೊರಗಡೆ ಒಂದು ಮಸೀದಿ ಇದೆ. ಇದನ್ನು ಕ್ರಿ. ಶ. 1503 ರಲ್ಲಿ ಬಹಮನಿಯ ಮಹಮದ್ ಷಾ ಕಟ್ಟಿಸಿದನು. ಕ್ರಿ.ಶ.1618 ರಲ್ಲಿ ರಾಯಚೂರಿನಲ್ಲಿ ಜಾಮಾ ಮಸೀದಿ ಕಟ್ಟಲಾಯಿತು. ಇವತ್ತಿನ ರಾಯಚೂರಿನಲ್ಲಿ ನಲವತ್ತೇಳು ಮುಸ್ಲಿಮರ ಮಸೀತಿಗಳಿವೆ.

## – 2 –

ಇವತ್ತಿನ ರಾಯಚೂರಿನ ಜಿಲ್ಲಾ ಜೈಲುಖಾನೆ, ಹಿಂದೆ ಅಲಿ ಆದಿಲ್ ಷಾ ರವರ ಅರಮನೆಯಾಗಿತ್ತು. ಇದರ ಎದುರುಗಡೆ ಸಾಲಿನ ಬಲಭಾಗದಲ್ಲಿ ಅಲಿಆದಿಲ್ ಷಾ ಕಟ್ಟಿಸಿದ ಮಸೀತಿ ಇದೆ. ಇದಕ್ಕೆ ಆಧಾರವಾಗಿ ಆ ಮಸೀದಿಯಲ್ಲಿ ಎರಡು ಶಿಲಾ ಶಾಸನಗಳು ಇವೆ. ಈ ಶಿಲಾಶಾಸನಗಳ ಮಧ್ಯೆ ಅಲಿ ಆದಿಲ್ ಷಾ ಕಾಲದಲ್ಲಿ ಖಾಜಿ ಕುತ್ಬ ಒದಲು ಕಟ್ಟಿಸಿದ ಮಿಂಬರ್ ಸ್ಟೇಜು ಇದೆ. ಇದಕ್ಕೆ ನಾಲ್ಕು ಮೆಟ್ಟಲು ಇದೆ. ಈ ಎರಡು ಶಿಲಾಶಾಸನಗಳು ಅರಬ್ಬಿ ಮತ್ತು ಪಾರ್ಸಿ ಭಾಷೆಯಲ್ಲಿವೆ. ಈ ಶಿಲಾ ಕಲ್ಮ ಮತ್ತು ಖುರಾನ್‌ನ ಅರ್ಥವನ್ನು ಬಯಲುಮಾಡುತ್ತವೆ. ಮತ್ತು ಆದಿಲ್ ಷಾ, ಮುಸ್ಲಿಂ ಧರ್ಮಕ್ಕೆ ನೀಡಿದ ನೆರವನ್ನು ಸ್ಮರಿಸುತ್ತವೆ.

## – 3 –

ರಾಯಚೂರಿನಲ್ಲಿ ಇತಿಹಾಸದ ಅವಶೇಷಗಳು ಬಹಳವಾಗಿವೆ. ಅವುಗಳೆಲ್ಲಾ ಚೆಲ್ಲಾಪಿಲ್ಲಿಯಾಗಿವೆ. ವಿಜಯನಗರದಕಾಲದ ಅನೇಕ ಹಿಂದುದೇವರವಿಗ್ರಹ, ಇಂದು ರಾಯಚೂರಿನ ಪ್ರವಾಸಿಮಂದಿರದ ಮುಂಭಾಗದಲ್ಲಿನೆಟ್ಟಿವೆ. ತೆಲುಗು, ಮತ್ತು ಕನ್ನಡ ದ ಶಾಸನಗಳು ಹೇರಳವಾಗಿವೆ. ಅವುಗಳೆಲ್ಲಾ ಮಾಸಿಹೋಗಿವೆ. ಓದಲು ಬಹಳಕಷ್ಟ ವಾಗಿದೆ. ಮಿಗಿಲಾಗಿ, ರಾಯಚೂರ ಕೋಟೆ ನೋಡಲು ಅಗತ್ಯವಾಗಿದೆ. ಇದು ನಮ್ಮ ರಾಯಚೂರು ನಿಲ್ದಾಣಕ್ಕೆ, ಈ ಕೋಟೆ ಮೂರುಫರ್ಲಾಂಗ್ ದೂರದಲ್ಲಿದೆ. ಈ ಕೋಟೆಯಮೇಲೆ, ಷಾಹಿಸುಲ್ತಾನರಕಾಲದ ಒಂದುಮಸೀತಿಇದೆ. ಇಲ್ಲಿಸೈನ್ಯದವರು, ಮತ್ತು ಕೋಟೆರಕ್ಷಣೆಮಾಡುವವರೂ, ಅಹಾರವನ್ನು ಪೋಷಿಸುವವರೂ, ಇದ್ದರು. ಈ ಮಸೀತಿಮುಂದೆ ರಮ್‌ಜಾನ್‌ಕಾಲದ ಹಸ್ಸೇನ್ ಮತ್ತು ಹುಸ್ಸೇನರ ಮೆರವಣಿಗೆ ಮಾಡುವ ಮುಸ್ಲಿಂಸಾಂಪ್ರದಾಯದ ಒಂದುಕಲ್ಲಿನ ಮಂಟಪಇದೆ. ಈ ಕಲ್ಲಿನಮಂಟಪ ದ ಮೇಲ್ಭಾಗದಸುತ್ತಲೂ, ಮುಸ್ಲಿಂ ಶಿಲ್ಪಿ ಕಲೆ ನೋಡಬಹುದು. ಸುತ್ತಲೂ ಹೂಗಳ ಚಿತ್ರ ಗುಂಡಾಕಾರವಾಗಿ ಕೆತ್ತಿದೆ. ಷಾಹಿಸುಲ್ತಾನರು. ಈ ಮಂಟಪದಲ್ಲಿ ನಿಂತು, ಸೈನ್ಯದ ಪೆರೇಡುಗಳನ್ನುನೋಡುತ್ತಿದ್ದರು. ಸುಲ್ತಾನರಕಾಲದಲ್ಲಿ, ಉಪಯೋಗಿಸುತ್ತಾ ಇದ್ದ ಒಂದು ದೊಡ್ಡ ತೋಪು ಇದೆ. ಈ ತೋಪಿನ ಸಿಡಿಮದ್ದು ಗದ್ವಾಲ್ ವರೆಗೂ ಹೋಗುತ್ತೆ.

ಷಾಹಿ ಸುಲ್ತಾನರ ಕಾಲದಲ್ಲಿ ಮುಸ್ಲಿಂಮತಕ್ಕೆಸೇರಿದ ಐವರುಹೆಣ್ಣುಹುಡು ಗರು, ಕೋಟೆಮೇಲೆ ಬಂದಿದ್ದಾಗ್ಗೆ ಕೆಲವುವ್ಯಭಿಚಾರಿಗಳು, ಅವರನ್ನುಮಾನಭಂಗ ಮಾಡಲುಯತ್ನಿಸಿದರು. ಬಹಳಮತಾಭಿಮಾನಿಯಾಗಿದ್ದ, ಆಪಂಚಸ್ತ್ರೀಯರು "ಅಲ್ಲಾ

ದಯವಿಟ್ಟು ಭೂಮಿಯುಬಾಗಿಲುತೆಗೆಎನ್ನಲು” ಭೂಮಿಬಾಯಿಬಿಟ್ಟಿತು. ಆಗಐವರೂ, ಅದರೊಳಗೆಬಿದ್ದರು. ಅವರ ಸೆರಗಿನಅಂಚುಮಾತ್ರ, ಮೇಲೆಕಾಣುತ್ತಿತ್ತು. ಆಸ್ತ್ರೀಯುರ ಅಣ್ಣನು ಅದನ್ನುನೇಡಿ ಬಹಳ ಪಶ್ಚಾತ್ತಾಪಪಟ್ಟು ತಾನೂಸಹಿತ ಅದರಲ್ಲಿಧುಮುಕಿದನೆಂದೂ, ಸ್ಥಳೀಯ ಸಾಂಪ್ರದಾಯ ತಿಳಿಸುತ್ತವೆ. ಇಂದಿಗೂಸಹಿತಅವರಸಮಾಧಿಗಳು; ಈ ಕೊಟೆಯಮೇಲೆಇದೆ ಸಾಕ್ಷಾತ್‌ಪರಶಿವನು, ಕೈಲಾಸವೆಂಬ ಗೌರಿಶಂಕರ ಶಿಖರದ ಮೇಲೆ ನಿಂತು ಭಾರತದ ಭವಿಷ್ಯ ನೋಡುವಂತೆ, ರಾಯಚೂರು ಕೋಟೆಮೇಲೆನಿಂತು, ಇಡೀರಾಯಚೂರುದೃಶ್ಯವನ್ನುನೋಡಿಅಮಿತಾನಂದಹೊದಬಹುದು. ಕೋಟೆಯಮೇಲೆ ನಿಂತು ನಾವುನೋಡುವಾಗ, ಮಲ್ಲಿಯಾಬಾದ್‌ನಮಾವಿನತೋಪುಗಳು, ಹೈದರಾಬಾದ್‌ಗೆ ಹೋಗುವ ಸೊಗಸಾದ ಸಿಮೆಂಟ್‌ರಸ್ತೆ, ಥಳಥಳನೆ ಹೊಳೆಯುವ ಕಪ್ಪುಬಣ್ಣದ ಹೊಲ, ಜಮೀನುಗಳು, ಮುಂತಾದವುಗಳನ್ನು ನೋಡಬಹುದು.

ರಾಯಚೂರಿನ ತೀನ್‌ಕಂದೀಲ್‌ಯಲ್ಲಿರುವ ಪೋಸ್ಟ್ ಆಫೀಸ್ ಹತ್ತಿರ ಶಿಥಿಲವಾದಆನೆಇದೆ. ಅಲಿಆದಿಲ್‌ಷಾ ರಾಯಚೂರುಗೆದ್ದ ಮೇಲೆ, ಎಲ್ಲಾ ಹಿಂದೂದೇವರ ವಿಗ್ರಗಳನ್ನು ಒಡೆದು, ಆ ವಿಗ್ರಹದಕಲ್ಲುಗಳನ್ನು ಕೋಟೆಯಗೋಡೆಗಳಿಗೆ ಉಪಯೋಗಿಸಿದರು. ಆದ್ದರಿಂದ ಇಂದುಸಹ ಕೋಟೆಗಳಗೋಡೆಗಳಮೇಲೆ, ಶಿಥಿಲವಾದಗಣಪತಿ ಮುಂತಾದವಿಗ್ರಹಗಳು ಇಂದಿಗೂಇವೆ· ನೂರಾರುಶಿಲಾಶಾಸನಗಳು, ಅಳಿಸಿಹೋಗಿವೆ. ಅವುಗಳಗುರುತನ್ನುಸಹ ಹಿಡಿಯಲು ಸಾಧ್ಯವಾಗದೇ ಹೋಗಿದೆ, ಆದ್ದರಿಂದ ಆದಿಲ್‌ಷಾ, ವಿಜಯನಗರದ ರಾಜಧಾನಿಯಿಂದ ಕೊಳ್ಳೆಹೊಡೆದ ಅನೇಕ ವಿಗ್ರಹಗಳನ್ನು ರಾಯಿಚೂರಿಗೆತಂದು ಇಲ್ಲಿಬಿಸಾಟಿದನೆಂದೂ, ಕೆಲವನ್ನು, ರಾಯಚೂರುಕೋಟೆಯ ಗೋಡೆಗೆ ಕಟ್ಟುವುದಕ್ಕೆ ಉಪಯೋಗಿಸಿದನೆಂದೂ, ತಿಳಿಯಬೇಕು. ಇಲ್ಲದಿದ್ದರೆ, ರಾಯಚೂರಿನಲ್ಲಿ ಇಷ್ಟೊಂದು ನೂರಾರುವಿಗ್ರಹಗಳು ಎಂದಿಗೂ ಪ್ರಾಚೀನದಿಂದ ಇರಲು ಸಾಧ್ಯವಿಲ್ಲ. ಆದ್ದರಿಂದ, ಆ ಪೋಸ್ಟಾಫಿಸ್, ಹತ್ತಿರ ಇರುವ ಆನೆಸಹಿತ, ಇವುಗಳಲ್ಲಿ ಒಂದಾಗಿರಬೇಕು.



## — ಮುಕ್ತಾಯ —

ಒಟ್ಟಿನಲ್ಲಿ ಈ ಸಂಕ್ಷಿಪ್ತವಾದ ಪ್ರಗತಿಪರರಾಯಚೂರಿನಇತಿಹಾಸವನ್ನು ನನ್ನ
ಶಕ್ತಿಮೀರಿ, ನನಗೆಸಿಕ್ಕಿದ ಆಧಾರಗಳನ್ನು ಪರಿಶೀಲಿಸಿ, ಸಂಶೋಧನೆಮಾಡಿ. ಬರೆದು
ರಾಯಚೂರಿನ ಪ್ರಗತಿಯ ಮುನ್ನೋಟವನ್ನು ಕಾತುರತೆಯಿಂದ ಎದುರು ನೋಡುತ್ತಿ
ದ್ದೇನೆ. ಇತಿಹಾಸ ಸಾಹಿತ್ಯದಕನ್ನಡಿ, ಸಂಸ್ಕೃತಿಯೇ ಆ ಕನ್ನಡಿಯಪಾದರಸ. ಕನ್ನಡಿ
ಪ್ರಕಾಶಮಾನವಾಗಿರಬೇಕಾದರೆ ಪಾದರಸವನ್ನು ಕನ್ನಡಿಯಹಿಂದೆ ಚನ್ನಾಗಿ ಬಳಿಸಿರ
ಬೇಕು. ಅದರಂತೆ ನಮ್ಮಗತಿಸಿದ ಹಿರಿಯರಾದ ವಿಜಯನಗರದರಾಜರ ಸಂಸ್ಕೃತಿಯನ್ನು
ಪುನರಜ್ಜೀವ ಗೊಳಿಸಲು ನಮ್ಮರಾಯಚೂರಿನ ಜನರು ಶ್ರಮಿಸಬೇಕು. ಪ್ರಾಚೀನ
ರಾಯಚೂರಿನ ಇತಿಹಾಸ ಈ ತರಹದ ಶ್ರಮಕ್ಕೆತಕ್ಕಆಧಾರವಾಗಲೆಂದು, ಮುಖ್ಯ ಅಭಿ
ಪ್ರಾಯಪಟ್ಟು, ಈ ಗ್ರಂಥವನ್ನು ರಚಿಸಬೇಕಾಯಿತು. ಎರಡನೆಯದಾಗಿ; ಕನ್ನಡಿಗರ
ಬಹಳಕಾಲದ ಹೆಬ್ಬಯಕೆಯಾದ ನಮನಗೆಯಕರ್ಣಾಟಕ ಪ್ರಾಂತರಚನೆ ಅತಿಜಾಗ್ರ
ಯಾಗಲಿದೆ. ರಾಯಚೂರು. ಕರ್ನಾಟಕಪ್ರಾಂತದ ಪ್ರಾಮುಖ್ಯಭಾಗವಾಗಿ, ಅದರಲ್ಲಿ
ಮಿಳನವಾಗಿದೆ. ಹಿಂದುಳಿದ ರಾಯಚೂರು, ಮುಂದೇಳುವ ಕರ್ಣಾಟಕ ಸಾಹಿತ್ಯ
ಮತ್ತು ಸಂಸ್ಕೃತಿಯ ಪ್ರಚಾರ ಮತ್ತು ಪ್ರಸಾರದ ಕರ್ತವ್ಯದಲ್ಲಿ, ಪ್ರಮುಖಪಾತ್ರ ವಹಿ
ಸಲು, ಅನುಕೂಲಕ್ಕೋಸ್ಕರ, ಈ ಗ್ರಂಥವನ್ನು ಬರೆಯಲಾಯಿತು. ಮೂರನೆಯದಾಗಿ
ರಾಯಚೂರಿನಲ್ಲಿ ಜನರು ಸರ್ವವಿಧದಲ್ಲೂ ಮುಂದುವರಿಯಬೇಕಾಗಿದೆ. ರಾಯಚೂರಿ
ನಜನರಿಗೆ, ತಮ್ಮದೇ ಆದ ರಾಯಚೂರುಚರಿತ್ರೆ ಗೊತ್ತಿಲ್ಲದೇಇದ್ದರೆ. ಮುಂದೆ ರಚನೆ
ಆಗಲಿರುವ ಕರ್ಣಾಟಕಪ್ರಾಂತದ ಸಂಸ್ಕೃತಿಯಪ್ರಗತಿಯ ಆಧಾರಸ್ತಂಭವಾಗಿ ನಿಲ್ಲಲು
ಶಕ್ಯರಾಗಲು ಸಾಧ್ಯವಾಗುವದಿಲ್ಲ. ರಾಯಚೂರುಚರಿತ್ರೆ ತಿಳಿದ ರಾಯಚೂರಿ ತನ್ನ
ಊರಿನ ಐತಿಹಾಸಿಕಪ್ರಭಾವದಿಂದಮೈಯುಬ್ಬಿ, ತ್ರಿಕರಣಶುದ್ಧಿಯಿಂದ ತನ್ನದೇಶವನ್ನು
ಉದ್ಧಾರಮಾಡಲು ಅನುವಾಗುವನು. ಇತಿಹಾಸತಿಳಿದಜನರಿಗೆ, ದೈವಭಕ್ತಿ, ಸ್ವಾಮಿ
ಭಕ್ತಿ, ಮತ್ತು ದೇಶಭಕ್ತಿ, ಇವುಮೂರು ಒಂದೇಸಮನೆ ಹೃದಯದಲ್ಲಿರುತ್ತೆ. ಆ
ಹೃದಯದಿಂದ, ರಾಯಚೂರಿಗಳು ತಮ್ಮ ಹಣೆಬರಹವನ್ನು, ಮಾರ್ಪಾಡುಮಾಡಿ
ಕೊಳ್ಳಬಹುದು. ಈ ಮಾರ್ಪಾಡನ್ನು ಮಾಡಿಕೊಳ್ಳುವಸಲುವಾಗಿ. ನನ್ನಗ್ರಂಥ ಬಹ
ಮಟ್ಟಿಗೆ ಸಹಕಾರಿಯಾಗಲೆಂದು, ಇದನ್ನುಶ್ರಮಪಟ್ಟು ರಚಿಸಬೇಕಾಯಿತು. ನಾಲ್ಕನೆ
ಯದಾಗಿ, ಕರ್ಣಾಟಕ ಪ್ರಾಂತರಚನೆ ಆದಮೇಲೆ. ಉತ್ತರ ಕರ್ನಾಟಕದ ಅನೇ
ಪ್ರದೇಶಗಳ ಇತಿಹಾಸ ಬರೆಯಬೇಕಾಗುತ್ತೆ. ಜನರಿಗೆ ಆ ಬಗ್ಗೆ ವಿಶೇಷತಿಳುವಳಿ
ಕೊಡಬೇಕಾಗುತ್ತೆ. ನಿಜವಾದಜ್ಞಾನಿ, ಇತಿಹಾಸದಬಗ್ಗೆ ಅತಿಗಮನ ಕೊಡುವನು
ಜ್ಞಾನಿಗಳಸ್ವತ್ತು ಅಂದರೆ ಇತಿಹಾಸ. ಕರ್ಣಾಟಕಪ್ರಾಂತರಚನೆ ಆಗುವಮುನ್ನ ಈ
ರಾಯಚೂರುಇತಿಹಾಸಪ್ರಕಟವಾಗಿ ಪ್ರಕಾಶಕ್ಕೆಬರುತ್ತಿರುವುದು, ಅಖಿಲಕರ್ಣಾಟಕ
ಪ್ರಗತಿಯಕುರುಹು ಎಂಬುದಾಗಿ ನನ್ನಭಾವನೆ.

ನಾಲ್ಕನೆಯದಾಗಿ, ಸಾಹಿತಿಗಳಿಗೂ, ಚರಿತ್ರೆಗೂ, ನಿಕಟಸಂಬಂಧ ಉಂಟು ಚರಿತ್ರೆಆಧಾರದಮೇಲೆ ಅನೇಕ ಸಾಹಿತಿಗಳು ಕಾದಂಬರಿಗಳನ್ನು ಬರೆಯುವವರು. ಕರ್ನಾಟಕದ ಸಾಹಿತಿಗಳಿಗೆ, ಈ ನನ್ನಗ್ರಂಥ ಬಹಳವುಟ್ಟಿಗೆ ಉಪಯೋಗವಾಗಲೆಂದು ನನ್ನ ಮತ್ತೊಂದು ಆಶಯವಾಗಿದೆ.

ಈಗಿನ ರಾಯಚೂರಿನಲ್ಲಿ ಪ್ರಾಚೀನಕಾಲದಿಂದ ಹೆಸರುವಾಸಿಯಾದ ಅನೇಕ ದೇವಸ್ಥಾನಗಳು ಇವೆ. ಅವುಗಳು ಯಾವುದೆಂದರೆ, (1) ಮಾಣಿಕ್ಯಪ್ರಭು ದೇವಸ್ಥಾನ (2) ರೇಲ್ವೆನಿಲ್ದಾಣದ ಹತ್ತಿರದ ರಾಮಲಿಂಗಯ್ಯನ ದೇವಾಲಯ. ಇಲ್ಲಿ ವರ್ಷಕ್ಕೆ ಒಂದುಸಾರಿ ದೊಡ್ಡಜಾತ್ರೆ ನಡೆಯುತ್ತದೆ (3) ರಣಜೀತ್ ಟಾಕೀಸ್ ಹತ್ತಿರದ ಲಕ್ಷ್ಮೀಗುಡಿ. (4) ಎರಡು ರಾಘವೇಂದ್ರ ಸ್ವಾಮಿಗಳ ಗುಡಿಗಳು. (5) ಗಾಜಗಾರ ಪೇಟೆಯಲ್ಲಿರುವ ನಗರೇಶ್ವರದೇವಸ್ಥಾನ (6) ಊರಹೊರಗಡೆ, ಒಂದುಮೈಲಿದೂರ ದಲ್ಲಿರುವ ಉಸುವಿನ ಪ್ರಾಣದೇವರ ಗುಡಿ, (7) ಕೋಟೆಯಲ್ಲಿ ಮುಂಗಲಿಪ್ರಾಣ ದೇವರು. (8) ಚಂದ್ರಕಾಂತ್ ಟಾಕೀಸ್ ಹತ್ತಿರದ ಮಹಾ ಬಲೇಶ್ವರಗುಡಿ. ಈ ದೇವಸ್ಥಾನಗಳು, ರಾಯಚೂರಿನ ಮೇಲ್ಮೆಗಾಗಿ ನಿರಂತರ ಪ್ರಕಾಶಮಾನವಾಗಿದೆ.

ರಾಯಿಚೂರಿನ ಎಲ್ಲಾಜನರು, ಇಂದಿಗೂಸಹ ಪಂಚ ದ್ರಾವಿಡಭಾಷೆಗಳನ್ನು ಆಡುವರು. ವ್ಯವಹಾರದಲ್ಲಿ ಕನ್ನಡವೇ ಬಹಳ. ರಾಯಚೂರುನಲ್ಲಿ ದಕ್ಷಿಣ ಲೈಲ್ವೆ ಯು ಅಂತ್ಯವಾಗಿ ಜಿ. ಐ. ಪಿ. ರೈಲ್ವೆಯು ಪ್ರಾರಂಭವಾಗುತ್ತದೆ. ಆದುದರಿಂದ ಇದು ಮುಖ್ಯ ರೈಲ್ವೆ ನಿಲ್ದಾಣವಾಗಿದೆ, ಎಲ್ಲಾ ಕಡೆಯಲ್ಲಿಯೂ, ಬೆಟ್ಟ ಗುಡ್ಡಗಳು ಹಬ್ಬಿವೆ ದಕ್ಷಿಣ ಉತ್ತರ ಮತ್ತು ಪೂರ್ವ ಇವು ಮೂರುದಿಕ್ಕುಗಳಲ್ಲಿಯೂ, ಹಿಂದಿನಿಂದ ಉಳಿದು ಕೊಂಡು ಬಂದಿರುವ ಮೂರು ದೊಡ್ಡ ಕೊಳಗಳಿವೆ.

ರಾಯಚೂರು ಸಮುದ್ರ ಮಟ್ಟದಿಂದ ಸುಮಾರು 1300ಅಡಿಗಳ ಎತ್ತರ ದಲ್ಲಿದೆ. ಪಶ್ಚಿಮ ದಿಕ್ಕಿನಲ್ಲಿರುವ ಎರಡು ಗುಡ್ಡದ ಸಾಲುಗಳು ಸುಮಾರು 1500 ಅಡಿ ಎತ್ತರದವರೆಗೂಹಬ್ಬಿದೆ. ಸಾಮಾನ್ಯವಾಗಿ ಭೂಮಿಯು ಆಗ್ನೇಯದಿಂದ ಈಶಾನ್ಯ ದಿಕ್ಕಿಗೆ ಇಳಿಜಾರಾಗಿದೆ. ಈ ಒಂದು ಗುಡ್ಡದಲ್ಲಿ ದರ್ಗಾ ಪವಿ ಓಬಿಮಸ್ ಎಂಬ ಮಸೀದಿ ಇದೆ. ಮತ್ತು ಈ ಆವರಣದಲ್ಲಿ ಸುಮಾರು 20 ಅಡಿ ಉದ್ದದ ಬಂದೂಕವು ಸಿಕ್ಕಿದೆ.

ಇಲ್ಲಿನ ನೆಲ ವಿಶೇಷವಾಗಿ ಕಪ್ಪು ಮಣ್ಣಿನಿಂದ ಕೂಡಿದೆ. ಈ ಮಣ್ಣು ಹತ್ತಿ ಯ ಬೆಳೆಗೆ ಬಹಳ ಅನುಕೂಲವಾಗಿದೆ. ಹತ್ತಿ, ಜೋಳ, ಮತ್ತು ಕಡಲೇಕಾಯಿ ಈ ಊರಿನ ಮುಖ್ಯ ಬೆಳೆಗಳು, ಈ ನಗರ ಕೃಷ್ಣಾ ಮತ್ತು ತುಂಗಭದ್ರಾ ನದಿಗೆ ಮಧ್ಯದಲ್ಲಿರುವುದರಿಂದ, ಭೂಮಿ ನಿರಂತರ ಸಾಗುವಳಿಗೆ ಅನುಕೂಲವಾಗಿದೆ.

ಕರ್ನಾಟಕ ಮತ್ತು ಮೈಸೂರು. — ಕನ್ನಡಕುಲರಸಿಕರಿಗೆ ಕರೆ.
ಸುಪ್ರಸಿದ್ಧ ಲೇಖಕರಾಗಲು ಸುಸಮಯ

ಪ್ರಾಚೀನ ಕರ್ನಾಟಕದ ಅಂದರೆ, ವಿಜಯನಗರ ಸ್ಥಾಪನೆಗೆ ಮೂಲಕಾರಣ
ಆನೆಗುಂದಿ ತಾಲ್ಲೋಕಿನಿಂದ ಕೂಡಿ ಶೋಭಾಯಮಾನವಾಗಿರುವ
ನಮ್ಮ ಮೈಸೂರಿನ ನೆರೆಬೀಡಾದ

ರಾಯಚೂರಿನ ಉಜ್ವಲ ಕನ್ನಡ ಮಾಸಪತ್ರಿಕೆ.

— ಅಮರವಾಣಿ —

ನಿಮ್ಮ
ಕನ್ನಡ ಸಂಸ್ಕೃತಿ, ಸಾಹಿತ್ಯ ಮುಂತಾದವುಗಳ ಬಗ್ಗೆ
ಲೇಖನಗಳನ್ನು ಕಳಿಸಿ ಸಾಹಿತ್ಯಪ್ರಿಯರಾಗಿರಿ.

- ಅಮರವಾಣಿ ಸಲಹೆಗಾರರ ಮಂಡಳಿ -

ಶ್ರೀ ಡಿ. ಕೆ. ಭೀಮಸೇನರಾಯರು ಎಂ. ಎ. ಪ್ರೊಫೇಸರ ಹೈದ್ರಾಬಾದ
,, ವಿದ್ವಾನ್ ಮಾನ್ವಿ ನರಸಿಂಗರಾಯರು ಎಂ.ಎ.ಪಿ.ಓ.ಎಲ್.ಎಲ್.ಎಲ್
,, ಬಿ. ವಿರೂಪಾಕ್ಷಪ್ಪನವರು ಎಂ. ಎಸ್. ಸಿ. ಪ್ರೊಫೇಸರ ಗುಲಬರ್ಗಾ.
,, ವಿದ್ಯಾರತ್ನ ಸಿದ್ದಯ್ಯನವರು ಪುರಾಣಿಕ ಬಿ. ಎ. ಎಲ್. ಎಲ್. ಬಿ.
,, ಪ್ರೊಫೆಸರ್ ಶ್ರೀನಿವಾಸರಾವ ಎಂ. ಎ. ರಾಯಚೂರು
,, ಪ್ರೊಫೆಸರ್ ಎಫ್. ಜಿ. ಮಠದ ಎಂ. ಎ., ಬಿ. ಓ. ಎಲ್., ಹೈದರಾಬಾದ
ಶ್ರೀಮತಿ ಜಯದೇವಿ ತಾಯಿಯವರು ಲಿಗಾಡೆ, ಸೋಲಾಪೂರ.

ವಿವರಗಳಿಗಾಗಿ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ

ಸಂಪಾದಕರು
ಶ್ರೀ. ಬಿ. ಎಂ. ವೀರೇಶ್ವರ ಶಾಸ್ತ್ರಿಗಳು ವಿದ್ವಾನ್.
ಅಮರವಾಣಿ ಕಾರ್ಯಾಲಯ,
ರಾಯಚೂರು.

ವಾರ್ಷಿಕ ಚಂದಾ ರೂ. ೫-೦-೦ ಬಿಡಿ ಸಂಚಿಕೆ ಆ. ೦-೮-